KA / BG-GPO/2515/WPP-47/2006-2008




# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೦೮ (ಪುಷ್ಯ ೪, ಶಕ ವರ್ಷ ೧೯೩೦) | ಸಂಚಿಕೆ ೫೧ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ಹೆಚ್.ಸಿ.ಕಾಂತರಾಜು, ಎ.ಪಿ.ಸಿ.152, ಡಿ.ಎ.ಆರ್.ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ:2:PR35:ಓಬಿ:326:2006–07 ದಿನಾಂಕ:03–02–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು 20:07 ದಿನಾಂಕ:25–08–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31–08–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)119/2007–08 ದಿನಾಂಕ:01–03–2008, 04–05–2008

**ಪ್ರಸ್ತಾವನೆ:**

ಶ್ರೀ.ಹೆಚ್.ಸಿ.ಕಾಂತರಾಜು, ಎ.ಪಿ.ಸಿ.152, ಡಿ.ಎ.ಆರ್.ಮಂಡ್ಯ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ಶ್ರೀ.ಹೆಚ್.ಸಿ.ಕಾಂತರಾಜು, ಎ.ಪಿ.ಸಿ.152, ಡಿ.ಎ.ಆರ್., ಮಂಡ್ಯ ಜಿಲ್ಲೆ, ನೀವು ಸಶಸ್ತ್ರ ಮೀಸಲು ಪಡೆ, ಮಂಡ್ಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ಕರ್ತವ್ಯಾಧಿಕಾರಿ ನಿಮಗೆ ದಿ:03–11–2006 ರಂದು ಮೈಸೂರಿನ ಆರೋಪಿಗೆ ಗಾರ್ಡ್ ಕರ್ತವ್ಯಕ್ಕೆ ನೇಮಿಸಿದಾಗ ನೀವು ಸದರಿ ಕರ್ತವ್ಯಕ್ಕೆ ಹೋಗಲು ನಿರಾಕರಿಸಿರುತ್ತೀರಿ. ಹೀಗೆ ನೀವು ನಿಮ್ಮ ಮೇಲ್ಪಟ್ಟ ಅಧಿಕಾರಿ ಆದೇಶವನ್ನು ಉಲ್ಲಂಘನೆ ಮಡುವುದರ ಮೂಲಕ ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:03–02–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲದ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 25–08–2007ರ ಆದೇಶ ದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ಹೆಚ್.ಸಿ.ಕಾಂತರಾಜು, ಎ.ಪಿ.ಸಿ.152, ಇವರು ವಹಿಸಿದ ಕರ್ತವ್ಯವನ್ನು ನಿರ್ವಹಿಸದಿರುವುದರಿಂದ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಯಾವುದೇ ಪರಿಣಾಮ ಬೀರದಂತೆ ಆರಿ ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿರುತ್ತದೆ. ಶ್ರೀಯುತರ ಪರಿಷ್ಕರಣ ಮೇಲ್ಮನವಿಯಲ್ಲಿ ವಹಿಸಿದ ಕರ್ತವ್ಯವನ್ನು ನಿರ್ವಹಿಸಲು ಸಾಧ್ಯವಾಗದಿರುವಂತಹ ಮಹತ್ತರವಾದ ಸಂದಿಗ್ಧ ಪರಿಸ್ಥಿತಿ ನಿರ್ಮಾಣವಾಗಿರುವುದಿಲ್ಲ. ಇವರ ದೊಡ್ಡಮ್ಮನವರ ಅನಾರೋಗ್ಯದ ಚಿಕಿತ್ಸೆಯನ್ನು ಇವರ ಕುಟುಂಬದ ಇತರ ಸದಸ್ಯರು ಯಾರಾದರೂ ಕೊಡಿಸುವ ಅವಕಾಶವಿರುತ್ತದೆ. ಆದ್ದರಿಂದ ಇವರ ಪರಿಷ್ಕರಣ ಮೇಲ್ಮನವಿಯಲ್ಲಿ ನೀಡಿರುವ ಕಾರಣಗಳು ಕರ್ತವ್ಯ ನಿರ್ವಹಿಸದಿರುವುದಕ್ಕೆ ಪೂರಕವಾಗಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 84 ಪೊಸಿಅ 2008 ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಹೆಚ್.ಸಿ.ಕಾಂತರಾಜು, ಎ.ಪಿ.ಸಿ.152, ಡಿ.ಎ.ಆರ್., ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಬಿ.ಬಿ.ಪ್ರಕಾಶ್, ಎಪಿಸಿ–131, ಡಿ.ಎ.ಆರ್., ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಇವರ ಆದೇಶ ಸಂಖ್ಯೆ:ಸಿಬ್ಬಂದಿ(2)ಪಿ.ಆರ್.35:06–07ಓಬಿ:326:06–07 ದಿನಾಂಕ:03–02–2007
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು 09:07–08 ದಿನಾಂಕ:25–08–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09–01–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)131:07–08 ದಿನಾಂಕ:14–05–2008

**ಪ್ರಸ್ತಾವನೆ:–**

ಶ್ರೀ.ಬಿ.ಬಿ.ಪ್ರಕಾಶ್, ಎಪಿಸಿ–131, ಡಿ.ಎ.ಆರ್., ಮಂಡ್ಯ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ಶ್ರೀ.ಬಿ.ಬಿ.ಪ್ರಕಾಶ್, ಎಪಿಸಿ–131, ಡಿ.ಎ.ಆರ್., ಮಂಡ್ಯ ಜಿಲ್ಲೆ, ನೀವು ಸಶಸ್ತ್ರ ಮೀಸಲು ಪಡೆ, ಮಂಡ್ಯದಲ್ಲಿ ಎಪಿಸಿ–131, ಆಗಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ, ಕರ್ತವ್ಯಾಧಿಕಾರಿ ನಿಮಗೆ ದಿ: 3.11.06 ರಂದು ಮೈಸೂರಿನ ಆರೋಪಿಗೆ ಗಾರ್ಡ್ ಕರ್ತವ್ಯಕ್ಕೆ ನೇಮಿಸಿದಾಗ ನೀವು ಸದರಿ ಕರ್ತವ್ಯಕ್ಕೆ ಹೋಗಲು ನಿರಾಕರಿಸಿರುತ್ತೀರಿ. ನೀವು ನಿಮ್ಮ ಮೇಲ್ಪಟ್ಟ ಅಧಿಕಾರಿ ಆದೇಶವನ್ನು ಉಲ್ಲಂಘನೆ ಮಾಡುವುದರ ಮೂಲಕ ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿತನ ನಿರ್ಲಕ್ಷ್ಯತೆ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 11–04–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕವೇತನ ಬಡ್ತಿಯನ್ನು ಆರುತಿಂಗಳ ಕಾಲ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 25–08–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಬಿ.ಬಿ. ಪ್ರಕಾಶ್, ಎಪಿಸಿ–131, ಇವರು ನೇಮಿಸಿದ ಕರ್ತವ್ಯವನ್ನು ನಿರ್ವಹಿಸಲು ನಿರಾಕರಿಸಿರುವರು. ಇವರು ಪರಿಷ್ಕರಣಾ ಮೇಲ್ಮನವಿಯಲ್ಲಿ ನೀಡಿರುವ ಕಾರಣಗಳಲ್ಲಿ ಯಾವುದೇ ಬಲವಾದ ಸಮರ್ಥನೆ ಇರುವುದಿಲ್ಲ, ಅಲ್ಲದೆ, ಇವರ ಪತ್ನಿಯ ಅನಾರೋಗ್ಯಕ್ಕೆ ಸಂಬಂಧಿಸಿದಂತೆ ಯಾವುದೇ ವೈದ್ಯಕೀಯ ಪ್ರಮಾಣಪತ್ರವನ್ನು ಒದಗಿಸಿರುವುದಿಲ್ಲ ಆದ್ದರಿಂದ ಇವರು ಕರ್ತವ್ಯನಿರ್ವಹಣೆಯಿಂದ ತಪ್ಪಿಸಿಕೊಳ್ಳಲು ಪತ್ನಿಯ ಅನಾರೋಗ್ಯದ ಬಗ್ಗೆ ನೆಲ ಹೇಳಿರುವುದು ಕಂಡುಬರುತ್ತದೆ. ಹೀಗಾಗಿ ಇವರಿಗೆ ಶಿಸ್ತು ಪ್ರಾಧಿಕಾರ ನೀಡಿರುವ ದಂಡನೆಯು ಸರಿಯಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 83 ಪೊಸಿಅ 2008 ಬೆಂಗಳೂರು, ದಿನಾಂಕ:11ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್(ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಬಿ. ಪ್ರಕಾಶ್, ಎಪಿಸಿ–131 ಡಿ.ಎ.ಆರ್., ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರಭಾರ)

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ನೇಮಿರಾಜು, ಪಿ.ಐ., ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ:ಸಿಬ್ಬಂದಿ:2:PR 61:ಓಬಿ:73:2006–07 ದಿನಾಂಕ:31–05–2007
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು 36:07–08 ದಿನಾಂಕ:19–12–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13–02–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)112/2007–08 ದಿನಾಂಕ:21–04–2008

**ಪ್ರಸ್ತಾವನೆ:**

ಶ್ರೀ.ನೇಮಿರಾಜು, ಪಿ.ಐ., ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಸಿ.ಪಿ.ಐ ಆಗಿ ಮಂಡ್ಯ ಗ್ರಾಮಾಂತರ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮಂಡ್ಯ ಗ್ರಾಮಾಂತರ ಪೊಲೀಸ್ ಠಾಣೆ ಮೊ.ಸಂ.436:06 ಕಲಂ.279–337–304(ಎ) ಐ.ಪಿ.ಸಿ. ಜೊತೆ 187 ಐ.ಎಂ.ವಿ. ಕಾಯಿದೆ ಪ್ರಕರಣದ ತನಿಖಾಧಿಕಾರಿಯಾದ ನೀವು ಮೃತ ಮಹಿಳೆಯ ಪತ್ತೆಗಾಗಿ ಕಾಣೆಯಾದವರ ಮಾಹಿತಿಯನ್ನು ಡಿ.ಸಿ.ಆರ್.ಬಿ. ವಿಭಾಗದಲ್ಲಿ ಪರಿಶೀಲಿಸಿರುವುದಿಲ್ಲ. ಮೃತರ ಚಹರೆಯನ್ನು ಇಂಟಲಿಜೆನ್ಸ್ ಗೆಜೆಟ್‌ನಲ್ಲಿ ಪ್ರಕರಣಿಸಿರುವುದಿಲ್ಲ. ಹೀಗೆ ನೀವು ಮೃತಳ ಹಾಗೂ ಆರೋಪಿಯನ್ನು ಪತ್ತೆ ಮಾಡುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡದೆ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಹಾಗೂ ಅಶಿಸ್ತು ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31–05–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದೂಡಿ ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 19–12–2007ರ ಆದೇಶ ದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ನೇಮಿರಾಜು, ಪಿ.ಐ., ಇವರ ಮೇಲ್ಮನವಿ ಮತ್ತು ದಾಖಲಾತಿಗಳನ್ನು ಪರಿಸೀಲಿಸಲಾಯಿತು. ಇವರ ಮೇಲಿನ ಆರೋಪವು ದಾಖಲಾತಿಗಳಿಂದ ದೃಢಪಡುತ್ತದೆ. ಅಲ್ಲದೆ, ಇವರು ಮೇಲ್ಮನವಿಯಲ್ಲಿ ಆರೋಪ ವಿಮುಕ್ತರನ್ನಾಗಿಸಲು ಯಾವುದೇ ಬಲವಾದ ಸಮರ್ಥನೀಯ ಕಾರಣಗಳನ್ನು ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 151 ಪೊಸಿಅ 2008 ಬೆಂಗಳೂರು, ದಿನಾಂಕ:28ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ನೇಮಿರಾಜು, ಪಿ.ಐ., ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1294

**ವಿಷಯ:** ಶ್ರೀ.ಎನ್.ಎಂ.ಗಣೇಶ್, ಎ.ಪಿ.ಸಿ.–156, ಡಿ.ಎ.ಆರ್. ಕೊಡಗು, ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರ ಆದೇಶ ಸಂಖ್ಯೆ:ಎಸ್.ಡಿ.ಸಿ./ಪಿಆರ್:80:07 ದಿನಾಂಕ:02–01–2008
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:57:07–08 ದಿನಾಂಕ:19–03–2008
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01–04–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)14:08–09 ದಿನಾಂಕ:12–06–08.

**ಪ್ರಸ್ತಾವನೆ:**

ಶ್ರೀ.ಎನ್.ಎಂ.ಗಣೇಶ್, ಎ.ಪಿ.ಸಿ.–156, ಡಿ.ಎ.ಆರ್. ಕೊಡಗು, ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಡಿ.ಎ.ಆರ್. ಮಡಿಕೇರಿಯಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಜುಲೈ ಹಾಗೂ ಆಗಸ್ಟ್ 2007ರ ತಿಂಗಳ ವಾರದ ಭತ್ಯೆ ಮಂಜೂರಾಗಿದ್ದು, ಸದರಿ ಬಿಲ್ಲಿನ ಮೊತ್ತವನ್ನು ಅವರ ಖಾತೆಗೆ ಜಮಾ ಮಾಡಲಾಗಿದ್ದು, ನಂತರ ಇವರಿಗೆ ವಾರದ ಭತ್ಯೆ ಬಿಲ್ಲಿಗೆ ಸಹಿ ಮಾಡುವಂತೆ ಸೂಚನೆ ನೀಡಿದ್ದರೂ, ಸಹಿ ಮಾಡಿರುವುದಿಲ್ಲ. ಪುನ: ತಿಳಿಸಿದ್ದಾಗ್ಯೂ ತೀವ್ರ ನಿರ್ಲಕ್ಷ್ಯತನದಿಂದ ವರ್ತಿಸಿರುತ್ತಾರೆ. ಇವರ ನಿರ್ಲಕ್ಷ್ಯತನದಿಂದ ಜುಲೈ ಹಾಗೂ ಆಗಸ್ಟ್ 2007ರ ತಿಂಗಳ ವಾರದ ಭತ್ಯೆ ಬಿಲ್ಲನ್ನು ಜಿಲ್ಲಾ ಪೊಲೀಸ್ ಕಛೇರಿಗೆ ಕಳುಹಿಸಿಕೊಡಲು ವಿಳಂಬವಾಗಿರುತ್ತದೆ. ಇವರು ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ನಿರ್ಲಕ್ಷಿಸಿ ಬೇಜವಾಬ್ದಾರಿತನ ಹಾಗೂ ಕರ್ತವ್ಯ ನಿರ್ಲಕ್ಷ್ಯತನ ತೋರಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:02–01–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮೂರು ತಿಂಗಳು ಮುಂದೂಡಿದ ದಂಡನೆ ವಿಧಿಸಿರುತ್ತಾರೆ .

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 19–03–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ವಾಹನ ಚಾಲಕರಾಗಿದ್ದು, ವಾರದ ವೇತನಬಡ್ತಿಯನ್ನು ಅವರ ಖಾತೆಗೆ ಜಮಾಮಾಡಿದ್ದರೂ ಸದರಿ ವಾರದ ಬಿಲ್ಲಿಗೆ ಸಹಿಮಾಡಿರುವುದಿಲ್ಲ ಎಂಬ ಆರೋಪವು ಸಾಬೀತಾಗಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 199 ಪೊಸಿಅ 2008 ಬೆಂಗಳೂರು, ದಿನಾಂಕ:08ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎನ್.ಎಂ.ಗಣೇಶ್, ಎ.ಪಿ.ಸಿ.–156, ಡಿ.ಎ.ಆರ್. ಕೊಡಗು, ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಡಿ.ಈಶ್ವರಸ್ವಾಮಿ, ಸಿಪಿಸಿ–1934, ಸಂಚಾರ ಪೂರ್ವಠಾಣೆ, ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ಆದೇಶ ಸಂಖ್ಯೆ:ಇವಿ/3/2006 ದಿ:20–09–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ–2/ಮೇಲ್ಮನವಿ/15/2006 ದಿನಾಂಕ: 04–01–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02–05–2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)26:2007–08 ದಿನಾಂಕ:10–08–2007 & 01–02–2008.

**ಪ್ರಸ್ತಾವನೆ:**

ಶ್ರೀ.ಡಿ.ಈಶ್ವರಸ್ವಾಮಿ, ಸಿಪಿಸಿ–1934, ಸಂಚಾರ ಪೂರ್ವಠಾಣೆ, ಮಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆ.ಪೊ.ಅ. ಶ್ರೀ.ಡಿ.ಈಶ್ವರಸ್ವಾಮಿ, ಸಿಪಿಸಿ–1934, ಆದ ನೀವು ಸಂಚಾರ ಪಶ್ಚಿಮ ಪೊಲೀಸು ಠಾಣೆಯಲ್ಲಿ ಕರ್ತವ್ಯದಲ್ಲಿರುತ್ತೀರಿ. ನಿಮ್ಮ ಮೇಲಾಧಿಕಾರಿಯವರು ನಿಮ್ಮನ್ನು ಪ್ರೊಸೆಸ್ ಕರ್ತವ್ಯಕ್ಕೆ ನೇಮಿಸಿದ್ದು, ಕೆ.ಐ.ಒ.ಸಿ.ಎಲ್ ಉದ್ಯೋಗಿಯಾಗಿರುವ ಶ್ರೀ.ಮನೋಹರ ಶೇಟ್, ಬಿನ್ ದೇವದಾಸ ಶೇಟ್, ಕ್ವಾರ್ಟರ್ಸ್ ನಂಬ್ರ ಬಿ–21, ಕೆ.ಐ.ಒ.ಸಿ.ಎಲ್. ಕಾವೂರು ಎಂಬವರ ವಿರುದ್ಧ ಸಿಸಿ ನಂ.9764/05ರಲ್ಲಿ ದಿ:30–01–06 ರಂದು ಹೊರಡಿಸಿದ ದಸ್ತಗಿರಿ ವಾರೆಂಟನ್ನು ಜ್ಯಾರಿಗಾಗಿ ನಿಮಗೆ ನೀಡಲಾಗಿತ್ತು. ದಿ:22–02–06 ರಂದು ನೀವು ವಾರೆಂಟು ಅಸಾಮಿಯಾದ ಮನೋಹರ್ ಶೇಟ್‌ರವರಿಗೆ ಅವರ ವಿರುದ್ಧ ಇರುವ ವಾರೆಂಟಿನ ಬಗ್ಗೆ ತಿಳಿಸಿ ಅವರನ್ನು ಕರೆದುಕೊಂಡು ಠಾಣೆಗೆ ಬಂದಿರುತ್ತೀರಿ. ನ್ಯಾಯಾಲಯದ ಆದೇಶದಂತೆ ಸದರಿ ವಾರೆಂಟುದಾರರಿಂದ ದಂಡನೆಯ ಬಾಬ್ತು ರೂ.3200/– ವಸೂಲಿ ಮಾಡಿ, ಬಿಟ್ಟು ಕಳುಹಿಸಿಕೊಡಬಹುದಾಗಿದ್ದರೂ, ನೀವು ದಂಡನೆಯ ಬಾಬ್ತು ಪೂರ್ತಿ ಹಣವನ್ನು ಅವರಿಂದ ವಸೂಲಿ ಮಾಡದೆ ಹಾಗೂ ಅವರನ್ನು ನ್ಯಾಯಾಲಯಕ್ಕೂ ಹಾಜರು ಪಡಿಸದೇ ಅವರು ರೂ.500/– ಕೊಟ್ಟ ಕೂಡಲೇ ಅವರನ್ನು ಬಿಟ್ಟು ಕಳುಹಿಸಿಕೊಟ್ಟು ತೀವ್ರತರದ ಕರ್ತವ್ಯ ಲೋಪವೆಸಗಿ ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ ದಿ:20–09–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ಮುಂದೂಡಿದ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದೇ ಪರಿಗಣಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:04–01–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರನ್ನು ಪ್ರೊಸೆಸ್ ಜಾರಿ ಕರ್ತವ್ಯ ನಿರ್ವಹಿಸಲು ನೇಮಕ ಮಾಡಲಾಗಿತ್ತು. ದಸ್ತಗಿರಿ ವಾರೆಂಟನ್ನು ಶ್ರೀ.ಮನೋಹರ ಶೇಟ್ ಬಿನ್ ದೇವದಾಸಶೇಟ್ ರವರಿಗೆ ಜಾರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸದೇ ದಂಡನೆಯ ಬಾಬ್ತು ರೂ.3200/–ನ್ನು ವಸೂಲು ಮಾಡದೆ ಅವರಿಂದ ರೂ.500/–ನ್ನು ಪಡೆದು ಬಿಟ್ಟು ಕಳುಹಿಸಿರುವ ಆರೋಪವು ಸಾಬೀತಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಇವರ ಮೇಲಿನ ಆರೋಪವು ಸಾಬೀತಾಗಿರುವುದರಿಂದ ಹಾಗೂ ಪರಿಷ್ಕರಣಾ ಮೇಲ್ಮನವಿಯಲ್ಲಿ ನೀಡಿರುವ ಕಾರಣಗಳಲ್ಲಿ ಆರೋಪವನ್ನು ತಳ್ಳಿಹಾಕುವಂತಹ ಯಾವುದೇ ಹೊಸ ಕಾರಣಗಳಾಗಲಿ ಸಮರ್ಥನೆಯಾಗಲಿ ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 303 ಪೊಸಿಅ 2007 ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಡಿ.ಈಶ್ವರಸ್ವಾಮಿ, ಸಿಪಿಸಿ–1934, ಸಂಚಾರ ಪೂರ್ವಠಾಣೆ, ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಎಸ್.ಎಂ.ರಾಜಶೇಖರ್, ಪಿ.ಸಿ.–1179, ಕುಂಸಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು, ಶಿವಮೊಗ್ಗ ಜಿಲ್ಲೆ ಇವರ ಆದೇಶ ಸಂಖ್ಯೆ:SDC:PR:(1):18:07 ದಿನಾಂಕ:23–05–2007.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ:ಅಪೀಲು:8:07 ಓ.ಬಿ.ಸಂ:531:07 ದಿನಾಂಕ:05–01–2008.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16–04–2008

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)19:2008–09. ದಿನಾಂಕ:20–06–2008

**ಪ್ರಸ್ತಾವನೆ:**

ಶ್ರೀ.ಎಸ್.ಎಂ.ರಾಜಶೇಖರ್, ಪಿ.ಸಿ.–1179, ಕುಂಸಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ದಿ:20–02–2007 ರಿಂದ 22–02–2007 ಮತ್ತು 25–02–2007 ರಿಂದ 27–02–2007ರ ವರೆಗೆ ಕುಂಸಿ ಠಾಣಾ ಸರಹದ್ದಿನ ಎರಡನೇ ಗ್ರಾಮ ಗಸ್ತಿನ ಅವಧಿಯಲ್ಲಿ ಮಾಹಿತಿ ಸಂಗ್ರಹಿಸದೆ ನಿರ್ಲಕ್ಷ್ಯತನ ತೋರಿಸಿದ್ದರಿಂದ ದೊಂಬಿ ಪ್ರಕರಣಗಳು ವರದಿಯಾಗಲು ಕಾರಣರಾಗಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:23–05–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶ ಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:05–01–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳಿರುವುದಿಲ್ಲ. ಅಲ್ಲದೆ, ಇವರಿಗೆ ವಿಧಿಸಿರುವ ದಂಡನೆಯೂ ಸಹ ಲಘು ದಂಡನೆಯಾಗಿದ್ದು, ಶಿಸ್ತು ಪ್ರಾಧಿಕಾರದ ಆದೇಶವನ್ನು ಪರಿಷ್ಕರಿಸಲು ಸಕಾರಣಗಳಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 207 ಪೊಸಿಅ 2008 ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಸ್.ಎಂ.ರಾಜಶೇಖರ್, ಪಿ.ಸಿ.–1179, ಕುಂಸಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಶೇಷಯ್ಯ, ಸಿ.ಪಿ.ಸಿ.–153, ಬಿಂಡಿಗಿನವಿಲೆ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ(2) ಡಿಇ:08:04–05 ಓಬಿ:2003:05–06 ದಿನಾಂಕ:22–07–2005.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:58:05–06 ದಿನಾಂಕ:17–07–2006

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04–03–2008

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)4:08–09 ದಿನಾಂಕ:04–06–08.

**ಪ್ರಸ್ತಾವನೆ:**

ಶ್ರೀ.ಶೇಷಯ್ಯ, ಸಿ.ಪಿ.ಸಿ.–153, ಬಿಂಡಿಗಿನವಿಲೆ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ಬಿಂಡಿಗಿನವಿಲೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:18–07–2000 ರಂದು ತಮಗೆ ಚರ್ಮ ಕಾಯಿಲೆ ಇದೆಯೆಂದು ವರದಿ ಮಾಡಿ ಎಂ.ಹೆಚ್.ಎಸ್. ಪಡೆದುಕೊಂಡು ಹೋಗಿರುತ್ತೀರಿ. ಈ ರೀತಿಯಾಗಿ ಹೋದವರು ಕರ್ತವ್ಯಕ್ಕೆ ಹಿಂದಿರುಗದೆ ತಮ್ಮ ಇರುವಿಕೆ ಬಗ್ಗೆಯೇ ಯಾವುದೇ ಮಾಹಿತಿಯನ್ನು ನೀಡಿರುವುದಿಲ್ಲ. ತಾವು ಚಿಕಿತ್ಸೆ ಪಡೆದಿರುವ ಬಗ್ಗೆ ಯಾವುದೇ ವರದಿಯನ್ನಾಗಲೀ, ರಜೆಯ ಅರ್ಜಿಯನ್ನಾಗಲೀ ನೀಡದೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ. ಇವರನ್ನು ಪೊಲೀಸ್ ಮ್ಯಾನುಯಲ್‌ನ ಆದೇಶ 525ರ ಪ್ರಕಾರ ಕರ್ತವ್ಯ ತ್ಯಾಗಿ ಎಂದು ಪರಿಗಣಿಸಲಾಗಿದೆ ಎಂದು ಅದನ್ನು ದಿ:22–07–2004 ರಂದು ಸ್ವೀಕರಿಸಿ ಕರ್ತವ್ಯಕ್ಕೆ ಮರಳದೆ ಗೈರು ಹಾಜರಾಗಿ ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿಯನ್ನು ತೋರಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:22–07–2005ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿ ಕರ್ತವ್ಯಕ್ಕೆ ಗೈರುಹಾಜರಾದ ಅವಧಿಯನ್ನು ವೇತನರಹಿತ ರಜೆ ಎಂದು ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 17–07–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ನೌಕರರು ತಮಗೆ ಚರ್ಮದ ಕಾಯಿಲೆ ಇದೆಯೆಂದು ಎಂ.ಹೆಚ್.ಎಸ್. ಪಡೆದುಕೊಂಡು ದಿ:18–07–2000 ರಂದು ಹೋದವರು ತಾವು ಯಾವ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿರುವ ಬಗ್ಗೆಯಾಗಲಿ ಮೇಲಾಧಿಕಾರಿಗಳ ಗಮನಕ್ಕೆ ತರದೆ ನಾಲ್ಕು ವರ್ಷಗಳ ಕಾಲ ಅನಧಿಕೃತವಾಗಿ ಮುಂದುವರೆದಿದ್ದು ದಿ:22–07–2004 ರಂದು ಪೊಲೀಸ್ ಮ್ಯಾನುಯಲ್ ಆದೇಶ 525ರ ಪ್ರಕಾರ ಕರ್ತವ್ಯ ತ್ಯಾಗಿ ಸೂಚನಾ ಪತ್ರ ನೀಡಿದ್ದಾಗಿಯೂ ದಿನಾಂಕ:24-11–2004 ರಂದು ಕರ್ತವ್ಯಕ್ಕೆ ಹಾಜರಾಗಲು ಬಂದಿರುವದನ್ನು ಗಮನಿಸಿದರೆ ಅವರಲ್ಲಿ ಸೇವಾ ತಾತ್ಸಾರ ಮತ್ತು ಬೇಜವಾಬ್ದಾರಿತನ ಮಟ್ಟವನ್ನು ತೋರುತ್ತದೆ. ಇಂತಹವರು ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಲು ಯೋಗ್ಯರಾಗುವುದಿಲ್ಲವೆಂದು ತೀರ್ಮಾನಿಸಬೇಕಾಗಿರುತ್ತದೆ. ಶ್ರೀ.ಶೇಷಯ್ಯ, ಸಿ.ಪಿ.ಸಿ.–153, ಇವರು ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೆ ಅಥವಾ ಕಾರಣಗಳನ್ನು ಒದಗಿಸಿರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 194 ಪೊಸಿಅ 2008 ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಶೇಷಯ್ಯ, ಸಿ.ಪಿ.ಸಿ.–153, ಬಿಂಡಿಗಿನವಿಲೆ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ನಾರಾಯಣಸ್ವಾಮಿ, ಪಿ.ಎಸ್.ಐ., ಕಾಕತಿ ಪೊಲೀಸ್ ಠಾಣೆ, ಹಾಲಿ ಟಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ:ಸಿಬ್ಬಂದಿ:2ಎ:PR:64:2006 ಆ.ಪು.33:07 ದಿನಾಂಕ:09–01–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು:145: ಉವ:07 ದಿನಾಂಕ:14–09–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13–12–2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)132:2007–08 ದಿನಾಂಕ:16–04–2008

**ಪ್ರಸ್ತಾವನೆ:**

ಶ್ರೀ.ನಾರಾಯಣಸ್ವಾಮಿ, ಪಿ.ಎಸ್.ಐ., ಕಾಕತಿ ಪೊಲೀಸ್ ಠಾಣೆ, ಹಾಲಿ ಟಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ಆಪಾದಿತ ಪೊಲೀಸ್ ಅಧಿಕಾರಿಯಾದ ನೀವುಗಳು ದಿ:29–05–2006 ರಂದು ಅರ್ಜಿದಾರರಾದ ಶ್ರೀ.ಮೋತಿ ಅನಂತರಾಮನಿಂಗ, ನಾರ್ವೇಕರ್ ಗಲ್ಲಿ ಶಹಾಪುರ, ಬೆಳಗಾವಿ ರವರ ಮೇಲೆ ಯಾವುದೇ ಪ್ರಕರಣ ಅಥವಾ ಅರ್ಜಿಗಳಿಲ್ಲದೆ ವಿನಾಕಾರಣವಾಗಿ ಅವರ ಕಾರ್ಖಾನೆಯಿಂದ ಎ.ಎಸ್.ಐ. ಮತ್ತು ಸಿ.ಹೆಚ್.ಸಿ.ರವರ ಮೂಲಕ ಅಕ್ರಮವಾಗಿ ಬಡಸೂಪ ಚೀಟಿನ 35 ಖಾಲಿ ಪ್ಯಾಕೆಟ್‌ನ ರೋಲುಗಳನ್ನು ಪಡೆದು, ಯಾವುದೇ ಕಾನೂನು ರೀತ್ಯ ಕ್ರಮಕೈಗೊಳ್ಳದೇ ಸತ್ಯಾಂಶ ಗಳನ್ನು ಕಂಡು ಹಿಡಿಯದೇ ಹುಬ್ಬಳ್ಳಿಯ ಇಲಿಯಾಸ್ ಹಾಗೂ ಸಮೀರ ಇವರಿಗೆ ಕೊಟ್ಟು ನಿಮ್ಮ ಕರ್ತವ್ಯದಲ್ಲಿ ಘೋರ ಬೇಜವಾಬ್ದಾರಿತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:09–01–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 2ವರ್ಷಗಳ ಕಾಲ ಮುಂದೂಡಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 14–09–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ನಾರಾಯಣಸ್ವಾಮಿ, ಪಿ.ಎಸ್.ಐ., ಇವರು ಮೇಲ್ಮನವಿ ಪ್ರಾಧಿಕಾರಕ್ಕೆ ನೀಡಿರುವ ಕಾರಣಗಳನ್ನು ಹೊರತುಪಡಿಸಿ ಬೇರೆ ಯಾವುದೇ ಹೊಸ ಸಮರ್ಥನೆಯನ್ನು ಪರಿಷ್ಕರಣ ಮೇಲ್ಮನವಿಯಲ್ಲಿ ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 149 ಪೊಸಿಅ 2008 ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ನಾರಾಯಣಸ್ವಾಮಿ, ಪಿ.ಎಸ್.ಐ., ಕಾಕತಿ ಪೊಲೀಸ್ ಠಾಣೆ, ಹಾಲಿ ಟಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಕೆ.ಎಸ್.ಕಲ್ಲೆದೇವರು, ಪಿ.ಎಸ್.ಐ., ಮುಡಬಿ ಪೊಲೀಸ್ ಠಾಣೆ, ಹಾಲಿ ಕಮಲಾಪೂರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ:4:ಲಶಿ:147:2005 ಪುಸ್ತಕ ಸಂ:180:2006 ದಿನಾಂಕ:25–05–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು:123:ಈವ/2006/496/ಆ.ಪು.ಸಂ/66/ಈವ/2007 ದಿನಾಂಕ:20–01–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:1–3–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)7:08–09 ದಿನಾಂಕ:3.6.08

**ಪ್ರಸ್ತಾವನೆ:**

ಶ್ರೀ.ಕೆ.ಎಸ್.ಕಲ್ಲೆದೇವರು, ಪಿ.ಎಸ್.ಐ., ಮುಡಬಿ ಪೊಲೀಸ್ ಠಾಣೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಮುಡಬಿ ಠಾಣೆ, ಗುನ್ನೆ ಸಂಖ್ಯೆ:53/2005 ಕಲಂ 366(ಎ) ಐಪಿಸಿ ಪ್ರಕರಣದಲ್ಲಿ ಕ್ರಮಬದ್ಧ ತನಿಖೆ ಕೈಗೊಳ್ಳುವಲ್ಲಿ ವಿಫಲರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:25–05–2006ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ಒಂದು ವಾರ್ಷಿಕ ವೇತನ ಮುಂಬಡ್ತಿಯು ಭವಿಷ್ಯದ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 20–01–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿ:15–04–2005 ರಂದು ಶ್ರೀಮತಿ. ಸುಶೀಲಾಬಾಯಿ ಗಂಡ ರೇವಣ ಸಿದ್ದಪ್ಪ, ಕಡದಾಳ, ಕಲಬೋರ ರವರು ಮುಡಬಿ ಪೊಲೀಸ್ ಠಾಣೆಗೆ ಬಂದು ತಮ್ಮ ಮಗಳು ಸವಿತಾಳನ್ನು ಶ್ರೀ.ರತನ್‌ಸಿಂಗ್ ಅಪಹರಿಸಿಕೊಂಡು ಹೋಗಿರುವುದಾಗಿ ಈ ಬಗ್ಗೆ ದೂರನ್ನು ದಾಖಲಿಸಲು ಕೋರಿದ್ದರೂ, ದೂರು ದಾಖಲಿಸದೇ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ವಹಿಸಿರುವುದು ಕಂಡು ಬಂದಿರುತ್ತದೆ. ತದನಂತರದ ಅವಧಿಯಲ್ಲಿ ಪಿರ್ಯಾದುದಾರರಿಂದ ಹೆಚ್ಚಿನ ಮಾಹಿತಿ ಪಡೆದಾಗಲಿ ಪ್ರಕರಣ ದಾಖಲಿಸಿರುವುದಿಲ್ಲ. ಸಾರ್ವಜನಿಕರ ಅವಹಾಲು ಬಗ್ಗೆ ಕ್ರಮ ವಹಿಸದೇ ನಿರ್ಲಕ್ಷ್ಯತನ ಬೇಜವಾಬ್ದಾರಿತನದಿಂದ ವರ್ತಿಸಿರುತ್ತಾರೆ. ಮೇಲಾಗಿ ದಂಡನೆಗೊಳಗಾದ ಅಧಿಕಾರಿಗಳು ತಮ್ಮ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಶೀಲಿಸಬಹುದಂತಾದ ಯಾವುದೇ ಹೊಸ ಅಂಶಗಳನ್ನು ಒದಗಿಸದ ಕಾರಣ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 192 ಪೊಸಿಅ 2008 ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಕೆ.ಎಸ್.ಕಲ್ಲೆದೇವರು, ಪಿ.ಎಸ್.ಐ., ಮುಡಬಿ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಪಿ.ಆರ್. 1380

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಆರ್.ಎಸ್.ಟಿ.ಖಾನ್, ಪಿ.ಎಸ್.ಐ., ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ಪೂರ್ವ ವಿಭಾಗ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:107:ಡಿಇ:R–7:ಪೊ:2006 ದಿ:03–02–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಹೆಚ್ಚುವರಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:21ಅಪೀಲು:2007 ದಿನಾಂಕ:26–05–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13–08–2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)77:2007–08 ದಿನಾಂಕ:19–12–2007

**ಪ್ರಸ್ತಾವನೆ:**

ಶ್ರೀ.ಆರ್.ಎಸ್.ಟಿ.ಖಾನ್, ಪಿ.ಎಸ್.ಐ., ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿನಾಂಕ:01–11–05 ರಂದು ಶ್ರೀಮತಿ ಪ್ರಮೀಳ ಗ್ರಬ್, ಡೆನ್ನಿಸನ್ ಅಪಾರ್ಟ್‌ಮೆಂಟ್‌ನ ನಂ.12, ಹಾಲ್ ರಸ್ತೆ, ರಿಚರ್ಡ್ಸ್ ಟೌನ್, ಬೆಂಗಳೂರು ಇವರು ತಮ್ಮ ದೂರಿನಲ್ಲಿ ಡೆನ್ನಿಸನ್ ಅಪಾರ್ಟ್‌ಮೆಂಟ್‌ನ ನಂ.303 ರಲ್ಲಿ ವಾಸವಿರುವ ಎಲ್.ಪಿ.ಪರೇಲ ಮತ್ತು ತಮ್ಮ ಮಧ್ಯ 1700 ಚದುರ ಅಡಿ ಜಾಗದ ಗಾರ್ಡನ್ ವಿಚಾರದಲ್ಲಿ ಸಿವಿಲ್ ವಿವಾದವಿದ್ದು, ಘನ 13ನೇ ಅಡಿಷನಲ್ ಸಿಟಿ ಸಿವಿಲ್ ನ್ಯಾಯಾಲಯದ ಒ.ಎಸ್.ನಂ.16565/2001 ರಲ್ಲಿ ನಡೆದು ನ್ಯಾಯಾಲಯವು ಅರ್ಜಿದಾರರ ಶ್ರೀ.ಎಲ್.ಪಿ.ಪರೇಲಾ ರವರ ಪರವಾಗಿ ಶಾಶ್ವತ ತಡೆಯಾಜ್ಞೆ ನೀಡಿದ್ದು ನ್ಯಾಯಾಲಯದ ಆದೇಶದಂತೆ ನಡೆದುಕೊಳ್ಳುತ್ತಿರುತ್ತೇವೆ. ಹೀಗಿದ್ದಾಗ ದಿ:01–11–2005 ರಂದು ತಾವು ಮನೆಯಲ್ಲಿ ಇಲ್ಲದಿರುವಾಗ ಬೆಳಿಗ್ಗೆ ಸುಮಾರು 10–00 ಘಂಟೆಯ ಸಮಯದಲ್ಲಿ ಶ್ರೀ ಎಲ್.ಪಿ.ಪರೇಲಾ ಹಾಗೂ ಶ್ರೀಮತಿ.ಪಿ.ಪರೇಲಾ, ಇ.ಟಿ.ಪೊನ್ನುಕುಟ್ಟಿಯನ್, ಶ್ರೀಮತಿ.ರೋಧ ಇರಾನಿ, ಚಂದ್ರಕುಮಾರ್ ಡೆನ್ನಿಸನ್ ಮತ್ತು ಶ್ರೀಮತಿ.ಸೂರ್ಯಕುಮಾರಿ ಡೆನ್ನಿಸನ್ ರವರು ತಮ್ಮ ಮನೆಯ ಹಿಂಭಾಗಕ್ಕೆ ಪ್ರವೇಶ ಮಾಡಿ ತಮ್ಮ ತಾಯಿಯನ್ನು ಅವಾಚ್ಯ ಶಬ್ದಗಳಿಂದ ಬೈದಿರುತ್ತಾರೆ. ಮನೆ ಕೆಲಸದಾಕೆ ಅಂಜಲಿ ಎಂಬುವರ ಜೊತೆ ಅನುಚಿತವಾಗಿ ವರ್ತಿಸಿರುತ್ತಾರೆ. ಇವರ ವಿರುದ್ಧ ಕ್ರಮ ಜರುಗಿಸಬೇಕೆಂದು ಫ್ರೇಜರ್ ಟೌನ್ ಪೊಲೀಸ್ ಠಾಣೆಯಲ್ಲಿ ದೂರು ನೀಡಿರುವ ಬಗ್ಗೆ ಶ್ರೀ.ಬಿ.ಸಿ.ಭೀಮಯ್ಯ, ಎ.ಎಸ್.ಐ ರವರು ದೂರನ್ನು ಪಡೆದು ಮೊ.ಸಂ.426/05, ಕಲಂ 143, 504, 506, 379 ರೆ/ವಿ 34 ಐ.ಪಿ.ಸಿ ಪ್ರಕಾರ ಕೇಸು ದಾಖಲು ಮಾಡಿಕೊಂಡಿರುತ್ತಾರೆ. ನಂತರ ನೀವು ಕೇಸಿನ ತನಿಖೆಯನ್ನು ವಹಿಸಿಕೊಂಡು ತನಿಖೆ ನಡೆಸಿ ದಿನಾಂಕ:04–04–2006 ರಂದು ಘನ 11ನೇ ಎ.ಸಿ.ಎಂ.ಎಂ. ನ್ಯಾಯಾಲಯಕ್ಕೆ ಕಲಂ 243, 504, 506 ರೆ/ವಿ 34 ಐ.ಪಿ.ಸಿ ಪ್ರಕಾರ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ಸಿ.ಸಿ.ನಂ.24317/06 ರಲ್ಲಿ ವಿಚಾರಣೆಯಲ್ಲಿರುತ್ತದೆ.

ಈ ಕೇಸಿನಲ್ಲಿ ಆರೋಪಿ ಎಂದು ತಿಳಿಸಿರುವ ಶ್ರೀ.ಎಲ್.ಪಿ.ಪರೇಲಾ ಎಂಬುವರು ಸಹಾಯಕ ಪೊಲೀಸ್ ಕಮೀಷನರ್, ಫ್ರೇಜರ್ ಟೌನ್ ಉಪ ವಿಭಾಗ ರವರನ್ನು ಬೇಟಿ ಮಾಡಿ ಈ ಕೇಸಿನಲ್ಲಿ ತನಿಖಾಧಿಕಾರಿಯವರು ಸರಿಯಾಗಿ ತನಿಖೆ ನಡೆಸದೇ ತಮ್ಮನ್ನು ಹಾಗೂ ಇತರರನ್ನು ವಿಚಾರಣೆ ಮಾಡದೇ ಆರೋಪಿಗಳನ್ನಾಗಿ ಮಾಡಿರುತ್ತಾರೆ ಎಂದು ತಿಳಿಸಿದ ಮೇರೆಗೆ ಸಹಾಯಕ ಪೊಲೀಸ್ ಕಮೀಷನರ್, ಫ್ರೇಜರ್‌ಟೌನ್ ಉಪ ವಿಭಾಗ ರವರು ಕೇಸಿನ ಕಡತವನ್ನು ಪರಿಶೀಲಿಸಲಾಗಿ ಈ ಕೆಳಕಂಡ ನ್ಯೂನತೆಗಳು ಹಾಗೂ ಲೋಪಗಳು ಕಂಡು ಬಂದಿರುತ್ತವೆ.

1) ಈ ಕೇಸಿನಲ್ಲಿ ಕೃತ್ಯಕ್ಕೊಳಪಟ್ಟವರೆನ್ನಲಾದ ಫಿರ್ಯದುದಾರ ತಾಯಿ ಶ್ರೀಮತಿ.ಎಂ.ಪಿ.ಡೆನ್ನಿಸನ್ ಎಂಬುವವರು ಮುಖ್ಯ ಸಾಕ್ಷಿಯಗಿದ್ದು, ಇವರನ್ನು ವಿಚಾರಣೆ ಮಾಡಿ ಅವರ ಹೇಳಿಕೆ ಪಡೆದಿರುವುದಿಲ್ಲ ಹಾಗೂ ಅವರನ್ನು ದೋಷಾರೋಪಣ ಪಟ್ಟಿಯ ಕಾಲಂ ನಂ.6ರಲ್ಲಿ ನಮೂದಿಸಿರುವುದಿಲ್ಲ.

2) ಸಾಕ್ಷಿದಾರರಾದ ಕುಮಾರಿ, ಅಂಜಲಿ ಮಟಿಲ್ಡಾ ಶ್ರೀ.ಅವಿನಾಶ್ ಗ್ರಬ್ ಶ್ರೀ.ರತ್ನಂ, ಇವರ ಹೇಳಿಕೆಗಳನ್ನು ಟೈಪ್ ಮಾಡಲಾಗಿದ್ದು, ಈ ಹೇಳಿಕೆಗಳಲ್ಲಿ ಕೃತ್ಯದ ಸಮಯದಲ್ಲಿ ಫಿರ್ಯಾದುದಾರರು ಸ್ಥಳದಲ್ಲಿದ್ದು, ಆರೋಪಿಗಳು ಅವರನ್ನು ಹಾಗೂ ಅವರ ತಾಯಿಯನ್ನು ಬೈದರು ಎಂದು ನಮೂದಿಸಿರುತ್ತಾರೆ. ಆದರೆ ಫಿರ್ಯಾದುದಾರರು ನೀಡಿರುವ ದೂರಿನಲ್ಲಿ ಕೃತ್ಯ ನಡೆದ ಸಮಯದಲ್ಲಿ ಫಿರ್ಯಾದುದಾರರ ತಾಯಿ ಮಾತ್ರ ಮನೆಯಲ್ಲಿದ್ದುದಾಗಿ ಫಿರ್ಯಾದುದಾರರು ಹೊರಗೆ ಹೋಗಿದ್ದಾಗಿ ತಿಳಿಸಿರುತ್ತಾರೆ. ಇದನ್ನು ಗಮನಿಸಿದರೆ ನೀವು ಕೃತ್ಯ ನಡೆದ ಸ್ಥಳಕ್ಕೆ ಭೇಟಿ ಕೊಟ್ಟು ಸಾಕ್ಷಿಗಳನ್ನು ಪ್ರತ್ಯೇಕವಾಗಿ ವಿಚಾರಣೆ ಮಾಡಿ ಅವರ ಹೇಳಿಕೆಯನ್ನು ಪಡೆಯದೇ ಪೊಲೀಸ್ ಠಾಣೆಯಲ್ಲಿಯೇ ಈ ಸಾಕ್ಷಿಗಳ ಹೇಳಿಕೆಯನ್ನು ನಿಮಗೆ ತೋಚಿದಂತೆ ಟೈಪ್ ಮಾಡಿ ಸುಳ್ಳು ಸಾಕ್ಷಿಗಳನ್ನು ಸೃಷ್ಠಿಸಿರುತ್ತೀರಿ. ಈ ಸಾಕ್ಷಿಗಳನ್ನು ಹೊರತುಪಡಿಸಿ ಡೆನ್ನಿಸನ್ ಅಪಾರ್ಟ್‌ಮೆಂಟ್‌ನಲ್ಲಿ ನೆಲೆಸಿರುವ ಬೇರ್‍ಯಾವ ಸಾಕ್ಷಿಗಳನ್ನು ವಿಚಾರಣೆ ನಡೆಸಿರುವುದಿಲ್ಲ.

3) ಫಿರ್ಯಾದುದಾರರ ದೂರನ್ನು ದಿ:02–11–2005 ರಂದು ಮರುವಿಚಾರಣೆ ಮಾಡಿ ಮರು ಹೇಳಿಕೆಯನ್ನು ಮಾಡಿರುವ ಬಗ್ಗೆ ಟೈಪ್ ಮಾಡಿದ್ದು, ಅದರಲ್ಲಿಯೂ ಸಹ ಕೃತ್ಯ ನಡೆಯಿತೆನ್ನಲಾದ ಸಮಯದಲ್ಲಿ ಫಿರ್ಯದುದಾರರು ಸ್ಥಳದಲ್ಲಿದ್ದರು, ಆರೋಪಿಗಳು ತಮ್ಮನ್ನು ಹಾಗೂ ತಮ್ಮ ತಾಯಿಯನ್ನು ಅವಾಚ್ಯ ಶಬ್ಧಗಳಿಂದ ಬೈದರು ಎಂದು ಈ ಘಟನೆಯ ಸಮಯದಲ್ಲಿ ತಮ್ಮ ಫಿರ್ಯಾದಿನಲ್ಲಿ ಆರೋಪಿಸಿರುವ ಚಂದ್ರಕುಮಾರ್ ಡೆನ್ನಿಸನ್ ಎಂಬುವವರು ತಮ್ಮ ಅಣ್ಣನಾಗಿದ್ದು, ಅವರು ಈ ಗಲಾಟೆ ನಡೆದಾಗ ಇರಲಿಲ್ಲವೆಂದು ತಿಳಿಸಿದ ಹಾಗೇ ಟೈಪ್ ಮಾಡಿರುತ್ತೀರಿ. ಇದನ್ನು ಗಮನಿಸಿದರೆ ಫಿರ್ಯಾದುದಾರರನ್ನು ನೀವು ಖುದ್ದಾಗಿ ವಿಚಾರಣೆ ಮಾಡದೇ ಅವರ ಮರುಹೇಳಿಕೆಯನ್ನು ಠಾಣೆಯಲ್ಲಿಯೇ ಟೈಪ್ ಮಾಡಿಸಿ, ಅವರ ಅಣ್ಣ ಚಂದ್ರಕುಮಾರ್ ಡೆನ್ನಿಸನ್ ಕೃತ್ಯ ನಡೆದ ಸಮಯದಲ್ಲಿ ಸ್ಥಳದಲ್ಲಿ ಇರಲಿಲ್ಲವೆಂದು ನಮೂದಿಸಿರುತ್ತೀರಿ.

4) ಆರೋಪಿಗಳಾದ ಶ್ರೀ.ಎಲ್.ಪಿ.ಪರೇಲಾ ಹಾಗೂ ಶ್ರೀಮತಿ.ಪಿ.ಪರೇಲಾ, ಇ.ಟಿ.ಪೊನ್ನುಕುಟ್ಟನ್, ಶ್ರೀಮತಿ.ರೋಧ ಇರಾನಿ, ಚಂದ್ರಕುಮಾರ್ ಡೆನ್ನಿಸನ್ ಮತ್ತು ಶ್ರೀಮತಿ ಸೂರ್ಯಕುಮಾರಿ ಡೆನ್ನಿಸನ್ ಇವರುಗಳು ಡೆನ್ನಿಸನ್ ಅಪಾರ್ಟ್‌ಮೆಂಟ್‌ನ ಖಾಯಂ ವಾಸಿಗಳಾಗಿದ್ದು ಈ ಘಟನೆಯ ಬಗ್ಗೆ ಅವರ ವಿಚಾರಣೆ ಮಾಡಿರುವುದಿಲ್ಲ. ನಿಮಗೆ ಈ ಘಟನೆಯ ಹಿನ್ನೆಲೆಯ ಅರಿವಿದ್ದು, ಮೇಲ್ಕಂಡ ವ್ಯಕ್ತಿಗಳು ಹಾಜರಿದ್ದರೂ ಅವರನ್ನು ವಿಚಾರಣೆ ಮಾಡಿ ನಿಜ ಸ್ಥಿತಿಯನ್ನು ತಿಳಿದುಕೊಳ್ಳದೇ ತಲೆ ಮರೆಸಿಕೊಂಡಿರುತ್ತಾರೆಂದು ಚಾರ್ಜ್‌ಶೀಟ್‌ನ ಕಾಲಂ ನಂ:7ರಲ್ಲಿ ಆರೋಪಿಗಳು ದಿ:01–11–05ರಂದು ಅಕ್ರಮ ಗುಂಪುಕಟ್ಟಿಕೊಂಡು ಸಮಾನ ಉದ್ದೇಶದಿಂದ ಸಾಕ್ಷಿ–1, ರವರ ಮನೆಯ ಬಳಿ ಹೋಗಿ ಅವರನ್ನು ಅವಾಚ್ಯ ಶಬ್ದಗಳಿಂದ ಬೈದು ಪ್ರಾಣ ಬೆದರಿಕೆ ಹಾಕಿರುತ್ತಾರೆ ಎಂದು ಸುಳ್ಳು ಆರೋಪ ಮಾಡಿರುತ್ತಾರೆ. ಶ್ರೀ.ಎಲ್.ಪಿ.ಪರೇಲಾ, ವಾಯು ಸೇನೆಯಲ್ಲಿ ಏರ್‌ಮಾರ್ಷಲ್ ಹುದ್ದೆಯಲ್ಲಿದ್ದು ನಿವೃತ್ತಿ ಹೊಂದಿದವರಾಗಿರುತ್ತಾರೆ. ಇವರಿಗೆ ಕಾನೂನಿನ ಅರಿವಿದ್ದು ಇವರಿಗೆ ಮತ್ತು ಫಿರ್ಯಾದುದಾರರ ಮಧ್ಯ ಇರುವ ಸಿವಿಲ್ ವಿವಾದದಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ಫಿರ್ಯಾದುದಾರರ ವಿರುದ್ಧ ಶಾಶ್ವತ ತಡೆಯಾಜ್ಞೆ ತಂದಿರುವ ವಿಚಾರ ನಿಮಗೆ ಗೊತ್ತಿದ್ದರೂ ಅವರನ್ನೇ ಆರೋಪಿಯನ್ನಾಗಿ ಮಾಡಿರುತ್ತೀರಿ. ಈ ಕೇಸಿನಲ್ಲಿ ನವೆಂಬರ್–05 ನಂತರ ಯಾವುದೇ ತನಿಖೆಯನ್ನು ನಡೆಸದೇ ಸುಮಾರು 5ತಿಂಗಳ ನಂತರ ನ್ಯಾಯಾಲಯಕ್ಕೆ ಚಾರ್ಜ್‌ಶೀಟ್ ಸಲ್ಲಿಸಿರುತ್ತೀರಿ. ಈ ಕೇಸಿನಲ್ಲಿ ನಡೆಸಿದ ತನಿಖೆಯನ್ನು ಮೇಲಾಧಿಕಾರಿಗಳಿಗೆ ವರದಿ ಮಾಡಿರುವುದಿಲ್ಲ. ಹಾಗೂ ಇದುವರೆಗೂ ಒಂದು ಸಿ.ಡಿ.ಯನ್ನೂ ಸಲ್ಲಿಸಿರುವುದಿಲ್ಲ.

ನೀವು ಈ ಕೇಸಿನಲ್ಲಿ ಪರಿಸ್ಥಿತಿಯ ಗಂಭೀರತೆಯನ್ನು ಅರಿತು ನಿಷ್ಪಕ್ಷ ತನಿಖೆಯನ್ನು ಮಾಡದೇ ಸಿವಿಲ್ ವ್ಯವಹಾರವನ್ನು ಕ್ರಿಮಿನಲ್ ಕೇಸ್ ಆಗಿ ಮಾರ್ಪಡಿಸಿ, ಶ್ರೀಮತಿ. ಪ್ರಮೀಳಾ ಗ್ರಬ್ ರವರಿಗೆ ಸಹಾಯ ಮಾಡುವ ಉದ್ದೇಶದಿಂದ ನಿವೃತ್ತ ಏರ್ ಮಾರ್ಷಲ್ ಶ್ರೀ.ಎಲ್.ಸಿ.ಪರೇಲಾ ಇತರರು ಸದರಿ ಅಪಾರ್ಟ್‌ಮೆಂಟ್‌ನಲ್ಲಿಯೇ ನೆಲೆಸಿದ್ದರೂ ನೀವು ತಲೆಮರೆಸಿ ಕೊಂಡಿರುತ್ತಾರೆಂದು ಸುಳ್ಳು ಚಾರ್ಜ್‌ಶೀಟ್‌ನ್ನು ಬರೆದು ನ್ಯಾಯಾಲಯಕ್ಕೆ ಸಲ್ಲಿಸಿ, ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ. ನೀವು ಚಾರ್ಜ್‌ಶೀಟ್ ಸಲ್ಲಿಸುವ ಮೊದಲಾಗಲಿ ತನಿಖಾ ಕಾಲದಲ್ಲಿಯೇ ಆಗಲಿ ಕೇಸಿನ ವಿಚಾರವನ್ನು ಮೇಲಾಧಿಕಾರಿಗಳ ಗಮನಕ್ಕೆ ತರದೇ ನಿಮ್ಮ ಕರ್ತವ್ಯದಲ್ಲಿ ಲೋಪವೆಸಗಿ ಅತೀವ ನಿರ್ಲಕ್ಷ್ಯತೆ ಬೇಜವಾಬ್ದಾರಿ ಹಾಗೂ ಸೇವಾದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.”

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ಪೂರ್ವ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ

ದಿನಾಂಕ:03–02–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ನಂತರದ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಹೆಚ್ಚುವರಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:26–05–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ಆರ್.ಎಸ್.ಟಿ.ಖಾನ್, ಪಿ.ಎಸ್.ಐ., ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ರವರು ಫ್ರೇಜರ್ ಟೌನ್ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:426/2005 ರಲ್ಲಿ ಹಾಗೂ ೫೫ನೇ ಎ.ಸಿ.ಎಂ.ಎಂ. ನ್ಯಾಯಾಲಯ ಸಿ.ಸಿ.ಸಂ.24317/2006ರಲ್ಲಿ ಮತ್ತು ಸಾಕ್ಷಿಗಳನ್ನು ವಿಚಾರಿಸಿ ಹೇಳಿಕೆ ಪಡೆಯದಿರುವುದು, ಮೊಕದ್ದಮೆಯ ಘಟನೆಯ ಬಗ್ಗೆ ಡೆನ್ನಿಸನ್ ಅಪಾರ್ಟ್‌ಮೆಂಟ್‌ನ ಖಾಯಂ ವಾಸಿಯಾಗಿರುವ ಆರೋಪಿಗಳ ಬಗ್ಗೆ ವಿಚಾರಣೆ ಮಾಡದಿರುವುದು ಮತ್ತು ಕೇಸ್‌ನಲ್ಲಿ 5 ತಿಂಗಳ ನಂತರ ನ್ಯಾಯಾಲಯಕ್ಕೆ ಚಾರ್ಜ್ ಶೀಟ್ ಸಲ್ಲಿಸಿರುವುದು ಹಾಗೂ ಪ್ರಕರಣದ ಬಗ್ಗೆ ತನಿಖೆಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸದಿರುವುದು ಮತ್ತು ಸಿ.ಡಿ.ಯನ್ನು ಒದಗಿಸದಿರುವುದು ಸಾಬೀತಾಗಿದ್ದು, ಈ ಬಗ್ಗೆ ಇವರು ನೀಡಿದ ಸಮಜಾಯಿಷಿಯು ಸಮಂಜಸವಾಗಿರುವುದಿಲ್ಲವೆಂದು ದಿ:03–02–2007 ರಂದು ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲದ ನಂತರದ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡಿ ಆದೇಶಿಸಿರುತ್ತಾರೆ. ಸದರಿ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಅಪೀಲು ಪ್ರಾಧಿಕಾರವಾದ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ರವರು ದಿ:26–05–2007 ರಂದು ತಿರಸ್ಕರಿಸಿರುತ್ತಾರೆ. ಈ ಆದೇಶಗಳ ವಿರುದ್ಧ ಶ್ರೀ.ಆರ್.ಎಸ್.ಟಿ.ಖಾನ್, ರವರು ಪರಿಷ್ಕರಣಾ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯ ಬಗ್ಗೆ ಆಯುಕ್ತರು ಹಾಗೂ ಡಿಜಿ ಮತ್ತು ಐಜಿಪಿ ರವರಿಂದ ಕಂಡಿಕೆವಾರು ಷರಾ ಪಡೆಯಲಾಗಿದೆ. ತಮ್ಮ ಮೇಲಿನ ಆರೋಪವನ್ನು ಅಲ್ಲಗೆಳೆಯುವ ಯಾವುದೇ ದಾಖಲೆಗಳನ್ನು, ಹೊಸ ಅಂಶಗಳನ್ನು ತಮ್ಮ ಪರಿಷ್ಕರಣ ಮೇಲ್ಮನವಿಯಲ್ಲಿ ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 12 ಪೊಸಿಅ 2008 ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಆರ್.ಎಸ್.ಟಿ.ಖಾನ್, ಪಿ.ಎಸ್.ಐ., ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1445

**ವಿಷಯ:** ಶ್ರೀ.ನರಸಪ್ಪ, ಎಪಿಸಿ–359, ಸಿ.ಎ.ಆರ್(ದಕ್ಷಿಣ), ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್,ಸಿ.ಎ.ಆರ್. ದಕ್ಷಿಣ, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/30/ಆರ್–6/2005–06 ದಿ:03–07–2006
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್., ಬೆಂಗಳೂರು, ಇವರ ಆದೇಶ ಸಂಖ್ಯೆ:23/ಅಪೀಲು/2/2006 ದಿನಾಂಕ:16–01–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26–11–2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)113:2007–08 ದಿನಾಂಕ:29–07–2008.

**ಪ್ರಸ್ತಾವನೆ:**

ಶ್ರೀ.ನರಸಪ್ಪ, ಎಪಿಸಿ–359, ಸಿ.ಎ.ಆರ್(ದಕ್ಷಿಣ), ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ಶ್ರೀ.ನರಸಪ್ಪ, ಪಿ.ಸಿ.–359, 'ಐ' ಪಂಗಡ, ಸಿ.ಎ.ಆರ್.(ದಕ್ಷಿಣ) ಬೆಂಗಳೂರು, ಆದ ನೀವು ದಿ: 09–12–2005 ರಿಂದ 18–01–2006ರ ವರೆಗೆ ಒಟ್ಟು 40ದಿನಗಳು ಯಾವುದೇ ಪೂರ್ವಾನುಮತಿ ಪಡೆಯದೇ ಮತ್ತು ಯಾವುದೇ ರಜೆ ಮಂಜೂರಾತಿ ಪಡೆಯದೆ ಇಲಾಖಾ ನಿಯಮವನ್ನು ಉಲ್ಲಂಘಿಸಿ, ಸಾರ್ವಜನಿಕ ಹಿತಾದೃಷ್ಟಿಯ ಸೇವೆಗೆ ಲಭ್ಯವಾಗದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿ, ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಲುವಾಗಿ ದಿ:19–01–2006 ರಂದು ವೈದ್ಯಕೀಯ ಪ್ರಮಾಣ ಪತ್ರವನ್ನು ಮಂಡಿಸಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದು ಶಿಸ್ತಿನ ಇಲಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಬೇಜವಾಬ್ದಾರಿಯುತ ನಿರ್ಲಕ್ಷ್ಯತನ ಹಾಗೂ ಕರ್ತವ್ಯದಲ್ಲಿನ ಅತೀವ ಅಶಿಸ್ತನ್ನು ಎತ್ತಿ ತೋರಿಸುತ್ತದೆ.
2) ಶ್ರೀ.ನರಸಪ್ಪ, ಪಿ.ಸಿ.–359, 'ಐ' ಪಂಗಡ, ಸಿ.ಎ.ಆರ್. (ದಕ್ಷಿಣ) ಬೆಂಗಳೂರು, ಆದ ನೀವು 09–02–2006 ರಿಂದ 10–03–2006ರ ವರೆಗೆ ಒಟ್ಟು 30ದಿನಗಳು ಯಾವುದೇ ಪೂರ್ವಾನುಮತಿ ಪಡೆಯದೇ ಮತ್ತು ಯಾವುದೇ ರಜೆ ಮಂಜೂರಾತಿ ಪಡೆಯದೆ ಪದೇ ಪದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಇಲಾಖಾ ನಿಯಮವನ್ನು ಉಲ್ಲಂಘಿಸಿ, ಸಾರ್ವಜನಿಕ ಹಿತಾದೃಷ್ಟಿಯ ಸೇವೆಗೆ ಲಭ್ಯವಾಗದೆ ಕರ್ತವ್ಯಕ್ಕೆ ಅನಧಿಕೃತ ವಾಗಿ ಗೈರುಹಾಜರಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಲುವಾಗಿ ದಿನಾಂಕ: 11–03–2006ರಂದು ವೈದ್ಯಕೀಯ ಪ್ರಮಾಣ ಪತ್ರವನ್ನು ಮಂಡಿಸಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಬೇಜವಾಬ್ದಾರಿತನ ನಿರ್ಲಕ್ಷ್ಯತನ ಹಾಗೂ ಕರ್ತವ್ಯದಲ್ಲಿನ ಅತೀವ ಅಶಿಸ್ತನ್ನು ಎತ್ತಿ ತೋರಿಸುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಸಿ.ಎ.ಆರ್. ದಕ್ಷಿಣ, ಬೆಂಗಳೂರು, ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ ದಿ: 03–07–2006ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್., ಬೆಂಗಳೂರು, ಇವರು ಮೇಲ್ಮನವಿಯಲ್ಲಿನ ಅಂಶಗಳನ್ನು ಪರಿಶೀಲಿಸಿ ಮೇಲ್ಮನವಿದಾರರು ಇಲಾಖಾ ನಿಯಮವನ್ನು ಉಲ್ಲಂಘಿಸಿ ಕರ್ತವ್ಯಕ್ಕೆ ಗೈರುಹಾಜರಿಯಾಗಿರುವ ಆರೋಪವು ಇಲಾಖಾ ವಿಚಾರಣೆಯಲ್ಲಿ ಯಾವುದೇ ಸಂಶಯಕ್ಕೆ ಎಡೆಮಾಡದಂತೆ ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರದ ಶಿಕ್ಷಾದೇಶವನ್ನು ಎತ್ತಿಹಿಡಿಯುತ್ತಾ ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 16–01–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ನರಸಪ್ಪ, ಎ.ಪಿ.ಸಿ.–359, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಪೂರಕ ಕಾರಣಗಳು ಹಾಗೂ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 152 ಪೊಸಿಅ 2008 ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ನರಸಪ್ಪ, ಎಪಿಸಿ–359, ಸಿ.ಎ.ಆರ್(ದಕ್ಷಿಣ), ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1444

**ವಿಷಯ:** ಶ್ರೀ.ರಿಯಾಜುಲ್ಲಾ ಷರೀಪ್, ಪಿ.ಸಿ.–399 (ಹಾಲಿ ಪಿ.ಸಿ.–216) ದೇವರಾಜ ಸಂಚಾರಿ ಠಾಣೆ, ಮೈಸೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ:02:03–04 ಓಬಿ:ಸಿವಿಲ್ 110:04–05 ದಿ:14–02–2005
2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:3:2005–06 ದಿನಾಂಕ:02–09–2005.
3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06–02–2006
4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)30:06 ದಿನಾಂಕ:14–03–2007

**ಪ್ರಸ್ತಾವನೆ:**

ಶ್ರೀ.ರಿಯಾಜುಲ್ಲಾ ಷರೀಪ್, ಪಿ.ಸಿ.–399, (ಹಾಲಿ ಪಿ.ಸಿ.–216) ದೇವರಾಜ ಸಂಚಾರಿ ಠಾಣೆ, ಮೈಸೂರು ನಗರ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಆರೋಪಿ ಸಿ.ಪಿ.ಸಿ.–399 ಶ್ರೀ.ರಿಯಾಜುಲ್ಲಾ ಷರೀಪ್, ಆದ ನೀವು ಮೈಸೂರು ಗ್ರಾಮಾಂತರ ಠಾಣೆಯಲ್ಲಿ ಓರ್ವ ಪೇದೆಯಾಗಿದ್ದು, ಪದೇಪದೇ ಕರ್ತವ್ಯಕ್ಕೆ ಗೈರುಹಾಜರಾಗಿರುವ ಪ್ರವೃತ್ತಿವುಳ್ಳವರಾಗಿದ್ದು, ಹಿಂದೆ ಗೈರುಹಾಜರಿಯಾದ ಅವಧಿಗೆ ಲಘುಶಿಕ್ಷೆ ವಿಧಿಸುವುದರ ಮೂಲಕ ಇತ್ಯರ್ಥಪಡಿಸಿ ಅಧಿಕಾರಿಗಳು ತಿಳುವಳಿಕೆ ಎಚ್ಚರಿಕೆ ನೀಡಿದ್ದರೂ ಸಹ ನೀವು ಗೈರುಹಾಜರಾಗುವ ಪ್ರವೃತ್ತಿಯನ್ನು ಬಿಡದೆ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ತೋರಿಸುತ್ತಾ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸುತ್ತಾ ಇದ್ದು, ನೀವು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಯಾವುದೇ ರೀತಿಯ ಮಾಹಿತಿಯನ್ನು ಸಂಬಂಧಪಟ್ಟ ಮೇಲಾಧಿಕಾರಿಗಳಿಗೆ ತಿಳಿಸದೆ ಕರ್ತವ್ಯಕ್ಕೆ ದಿ:24–10–2002 ರಿಂದ 14–11–2002 ರವರೆಗೆ, ದಿ:09–12–2002 ರಿಂದ 10–12–2002, 17–01–2003 ರಿಂದ 29–01–2003 ಮತ್ತು 12–04–2003 ರಿಂದ 26–05–2003 ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ಎಂದು ಆರೋಪಿ ಪೇದೆ–399 ರಿಯಾಜುಲ್ಲಾ ಷರೀಪ್ ರವರ ವಿರುದ್ಧ ಆರೋಪವಿರುವುದರಿಂದ ಈ ಆಪಾದನಾ ಪತ್ರವನ್ನು ವಿವರವಾದ ಇಲಾಖಾ ವಿಚಾರಣೆಗಾಗಿ ಆರೋಪಿ ಪೇದೆಗೆ ನೀಡಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:14–02–2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಅಡ್ಡಿ ಉಂಟು ಮಾಡುವಂತೆ ಮೂರು ವರ್ಷಗಳ ಕಾಲ ತಡೆಹಿಡಿಯಲಾಗಿದೆ. ಹಾಗೂ ಇವರ ಅನಧಿಕೃತ ಗೈರು ಹಾಜರಿ ಅವಧಿ ದಿ: 26–10–2002 ರಿಂದ 03–11–2002ರ ವರೆಗೆ, 10–11–02, 13–11–02 ಮತ್ತು 14–11–02, ದಿ:17–01–03 ರಿಂದ 29–01–03 ರವರೆಗೆ ಹಾಗೂ 12–04–03 ರಿಂದ 26–05–03ರ ವರೆಗೆ ವೇತನರಹಿತ ರಜೆಯನ್ನಾಗಿ ಪರಿಗಣಿಸಲಾಗಿದೆ. ಇವರ ಅಮಾನತ್ತಿನ ಅವಧಿ ದಿ:13–10–03 ರಿಂದ 23–04–04ರ ವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ

ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 02–09–2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪ್ರಕರಣದಲ್ಲಿ ಶ್ರೀ.ರಿಯಾಜುಲ್ಲಾ ಷರೀಫ್, ಪಿ.ಸಿ.–399, ಇವರು ಇನ್ನು ಮುಂದೆ ನಿಯಮಿತವಾಗಿ ಕರ್ತವ್ಯಕ್ಕೆ ಹಾಜರಾಗುತ್ತೇನೆ, ಈಗ ನೀಡಿರುವ ಶಿಕ್ಷೆಯ ಪ್ರಮಾಣವನ್ನು ಕಡಿಮೆ ಮಾಡಬೇಕೆಂದು ಪರಿಷ್ಕರಣಾ ಮೇಲ್ಮನವಿಯಲ್ಲಿ ಕೋರಿರುವರು. ಆದರೆ ಇವರು ಪದೇಪದೇ ಅನಧಿಕೃತ ಗೈರುಹಾಜರಾಗಿರುವುದಕ್ಕೆ ಬಲವಾದ ಸಮರ್ಥನೀಯವಾದ ಪೂರಕ ಕಾರಣಗಳನ್ನು ನೀಡಿರುವುದಿಲ್ಲ. ಅಲ್ಲದೆ, ಇವರಿಗೆ ಈ ರೀತಿಯ ದಂಡನೆಯ ಶಿಕ್ಷೆಯನ್ನು ವಿಧಿಸಿದ್ದರೂ ಕೂಡ ಇವರ ಪ್ರವೃತ್ತಿಯಲ್ಲಿ ಯಾವುದೇ ಬದಲಾವಣೆ ಆಗಿಲ್ಲವೆಂದು ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ದಿ:30–05–2006ರ ಪತ್ರದಲ್ಲಿ ತಿಳಿಸಿರುವರು. ಹೀಗಾಗಿ ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿರುವ ದಂಡನೆಯನ್ನು ಕಡಿಮೆ ಮಾಡುವುದು ಅಥವಾ ರದ್ದುಪಡಿಸುವುದು ಸೂಕ್ತವಲ್ಲವೆಂದು, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 22 ಪೊಸಿಅ 2007 ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ರಿಯಾಜುಲ್ಲಾ ಷರೀಫ್, ಪಿ.ಸಿ.–399, (ಹಾಲಿ ಪಿ.ಸಿ.–216) ದೇವರಾಜ ಸಂಚಾರಿ ಠಾಣೆ, ಮೈಸೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಎ.ಶಿವಲಿಂಗಯ್ಯ, ಪಿ.ಎಸ್.ಐ., ಈ ಹಿಂದೆ ನುಗ್ಗೇಹಳ್ಳಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಹಾಲಿ ವಿರಾಜಪೇಟೆ ಪೊಲೀಸ್ ಠಾಣೆ, ಕೊಡಗು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ:(1):PR:1:04 ದಿನಾಂಕ:26–06–2007.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30–10–2007
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)114:07–08 ದಿನಾಂಕ:01–04–08

**ಪ್ರಸ್ತಾವನೆ:**

ಶ್ರೀ.ಎ.ಶಿವಲಿಂಗಯ್ಯ, ಪಿ.ಎಸ್.ಐ., ಈ ಹಿಂದೆ ನುಗ್ಗೇಹಳ್ಳಿ, ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಹಾಸನ ಜಿಲ್ಲೆಯಿಂದ ವರ್ಗಾವಣೆಗೊಂಡು ಸ್ಥಳ ನಿಯುಕ್ತಿಯ ನಿರೀಕ್ಷಣೆಯಲ್ಲಿ ಪೊಲೀಸ್ ಮಹಾ ನಿರ್ದೇಶಕರು, ದಕ್ಷಿಣ ವಲಯ, ಮೈಸೂರು, ಇವರು ಕಛೇರಿಯಲ್ಲಿರುವಾಗ ದಿನಾಂಕ:27–04–2005 ರಿಂದ 25–06–2005ರ ವರೆಗೆ ಗೈರುಹಾಜರಾಗಿದ್ದಾರೆಂಬ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:26–06–2007ರ ಆದೇಶದಲ್ಲಿ ಅರ್ಜಿದಾರರು ಗೈರುಹಾಜರಾದ ದಿನಾಂಕ:27–04–2005 ರಿಂದ 25–06–2005ರ ವರೆಗಿನ ಅವಧಿಗೆ ಕೆ.ಸಿ.ಎಸ್.ನಿಯಮ 106(ಎ)ರ ಪ್ರಕಾರ "ವೇತನರಹಿತ ರಜೆ" ಎಂಬ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿ:27–04–2005 ರಿಂದ 25–06–2005ರ ವರೆಗೆ ಗೈರು ಹಾಜರಾಗಿರುವ ಬಗ್ಗೆ ಅಧಿಕಾರಿಗಳು ಸಲ್ಲಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ವರ್ಗಾ ವಣೆಯಾದ ಸ್ಥಳಕ್ಕೆ ಹಾಜರಾಗಲು ಇಷ್ಟವಿಲ್ಲದೆ ಮಾಡಲಾಗಿರುವ ವ್ಯವಸ್ಥೆಯಂತೆ ಕಂಡು ಬಂದಿರುತ್ತದೆ. ಅಧಿಕಾರಿಗಳು ಇಲಾಖೆಯಲ್ಲಿನ 28 ವರ್ಷಗಳ ಹಿಂದಿನ ಸೇವೆಯಲ್ಲಿ 5ಲಘು ಶಿಕ್ಷೆಗಳಿಗೆ ಒಳಗಾಗಿರುವುದರಿಂದ ಶಿಸ್ತುಪ್ರಾಧಿಕಾರಿಗಳು ವಿಧಿಸಿರುವ ದಂಡನೆಯನ್ನು ಮಾರ್ಪಡಿಸುವ ಅಗತ್ಯವಿಲ್ಲ ಹಾಗೂ ಇವರು ಅಪೀಲು ಪ್ರಾಧಿಕಾರಕ್ಕೆ ನೀಡಿರುವ ಕಾರಣಗಳನ್ನು ಹೊರತುಪಡಿಸಿ ಬೇರೆ ಯಾವುದೇ ಹೊಸ ಸಮರ್ಥನೆಯನ್ನು ಪರಿಷ್ಕರಣಾ ಮೇಲ್ಮನವಿಯಲ್ಲಿ ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 123 ಪೊಸಿಅ 2008 ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೋಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎ.ಶಿವಲಿಂಗಯ್ಯ, ಪಿ.ಎಸ್.ಐ., (ಈ ಹಿಂದೆ ನುಗ್ಗೇಹಳ್ಳಿ, ಪೊಲೀಸ್ ಠಾಣೆ) ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಶಿವನಗೌಡ ಪಾಟೀಲ್, ಪಿ.ಎಸ್.ಐ., (ಕಾ & ಸು), ನಗರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ:(3)PR:07:2007 ಓಬಿ:ನಂ:2017:07 ದಿನಾಂಕ:21–02–2007
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು :78:07:4857 ದಿನಾಂಕ:01–09–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01–04–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)12:08–09 ದಿನಾಂಕ:12–06–08.

**ಪ್ರಸ್ತಾವನೆ:**

ಶ್ರೀ.ಶಿವನಗೌಡ ಪಾಟೀಲ್, ಪಿ.ಎಸ್.ಐ., (ಕಾ & ಸು), ನಗರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

" ಶ್ರೀ.ಶಿವನಗೌಡ ಪಾಟೀಲ್, ಪಿ.ಎಸ್.ಐ., ರವರೇ ನೀವು ಸಿಂಧನೂರು ನಗರ ಠಾಣೆಯಲ್ಲಿ ಪಿ.ಎಸ್.ಐ. (ಕಾ.ಸು) ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದು, ಠಾಣಾಧಿಕಾರಿಯಾದ ನೀವು ನಗರ ಠಾಣಾ ವ್ಯಾಪ್ತಿಯಲ್ಲಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡುವುದರ ಜೊತೆಯಲ್ಲಿ ಸಮಾಜ ಬಾಹಿರ ಚಟುವಟಿಕೆಗಳಾದ ಮಟಕಾ ಜೂಜಾಟ, ಇಸ್ಪೇಟ್ ಜೂಜಾಟ ಮತ್ತು ಇಂತಹ ಇನ್ನಿತರ ಚಟುವಟಿಕೆಗಳು ನಡೆಯದಂತೆ ನೋಡಿಕೊಂಡು ಹೋಗುವುದು ನಿಮ್ಮ ಆದ್ಯ ಕರ್ತವ್ಯ. ಆದರೆ ಈ ಕರ್ತವ್ಯವನ್ನು ನೀವು ನಿರ್ವಹಿಸುವಲ್ಲಿ ವಿಫಲರಾಗಿರುವಿರಿ ದಿ:18–01–2007 ರಂದು 21–00 ಗಂಟೆಗೆ ಸಿಂಧನೂರು ನಗರದ ಜಗದೀಪ ಹೆಗ್ಡೆ ಪೆಟ್ರೋಲ ಬಂಕ ಹತ್ತಿರ ಡಿ.ಎಸ್.ಪಿ. ಸಿಂಧನೂರ ರವರು, ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ರವರ ಸ್ಕ್ವಾಡ್‌ದೊಂದಿಗೆ ಮಟಕಾ ಅಡ್ಡೆಯ ಮೇಲೆ ದಾಳಿಮಾಡಿ ನದೀಮ ತಂದೆ ಮದಾರಸಾಬ ಮತ್ತು ರಫೀಕ್ ತಂದೆ ಜಬ್ಬರ ಸಾಬ ಇವರನ್ನು ದಸ್ತಗಿರ ಮಾಡಿ ಇವರಿಂದ ಮಟಕಾ ಜೂಜಾಟದ ಹಣ ರೂ.1205/– ಮಟಕಾ ಜೂಜಾಟದ ಸಾಮಗ್ರಿ ಹಾಗೂ ಒಂದು ಸುಜ್ಜುಕಿ ಮೋಟರ್ ಸೈಕಲ್ ಜಪ್ತಿ ಮಾಡಿಕೊಂಡು ನಗರ ಠಾಣೆಯಲ್ಲಿ ಗುನ್ನೆ ನಂ:13/07 ಕಲಂ.78(3) ಕೆ.ಪಿ.ಕಾಯ್ದೆ ಪ್ರಕಾರ ಗುನ್ನೆ ದಾಖಲು ಮಾಡಿರುವರು. ಹೀಗಾಗಿ ಮೇಲಾಧಿಕಾರಿಗಳು ನಿಮಗೆ ಸಿಂಧನೂರು ನಗರದಲ್ಲಿನ ಮಟಕಾ ಜೂಜಾಟವನ್ನು ನಿಯಂತ್ರಿಸಲು ಸಾಕಷ್ಟು ಸಲ ಸೂಚನೆಗಳನ್ನು ನೀಡಿದಾಗ್ಯೂ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಸದರಿ ಜೂಜಾಟವನ್ನು ತಡೆಗಟ್ಟುವಲ್ಲಿ ವಿಫಲರಾಗಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 21–02–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯ ಅವಧಿ ಮೀರಿರುವುದರಿಂದ ಅದನ್ನು ಪರಿಗಣಿಸದೇ ದಿನಾಂಕ: 01–09–2007 ರಂದು ಹಿಂಬರಹ ನೀಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ. ಶ್ರೀ.ಶಿವನಗೌಡ ಪಾಟೀಲ್, ಪಿ.ಎಸ್.ಐ., ಇವರು ಕರ್ತವ್ಯ ನಿರ್ವಹಿಸುತ್ತಿದ್ದ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ನಡೆಯುತ್ತಿದ್ದ ಮಟಕಾ, ಜೂಜಾಟ ಇನ್ನಿತರ ಸಮಾಜಘಾತುಕ ಚಟುವಟಿಕೆಗಳನ್ನು ಹತ್ತಿಕ್ಕಲು ವಿಫಲರಾಗಿ ಕರ್ತವ್ಯಲೋಪವೆಸಗಿರುವುದು ಸಾಬೀತಾಗಿರುತ್ತದೆ. ಇದಕ್ಕಾಗಿ ಇವರಿಗೆ ಶಿಸ್ತುಪ್ರಾಧಿಕಾರಿಗಳು ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ ಮತ್ತು ಅಮಾನತ್ತಿನ ಅವಧಿ ದಿ:21–01–07 ರಿಂದ 15–02–07ರ ವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದೆ. ಈ ದಂಡನೆಯು ಇವರು ಮಾಡಿರುವ ಕರ್ತವ್ಯಲೋಪಕ್ಕೆ ಸರಿಯಾಗಿರುತ್ತದೆ. ಅಲ್ಲದೆ ಇವರು ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿಯಲ್ಲಿ ಕರ್ತವ್ಯಲೋಪ ಎಸಗಿರುವುದಕ್ಕೆ ಯಾವುದೇ ಬಲವಾದ ಸಮರ್ಥನೆಯನ್ನು ನೀಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 204 ಪೊಸಿಅ 2008 ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಶಿವನಗೌಡ ಪಾಟೀಲ್, ಪಿ.ಎಸ್.ಐ., (ಕಾ & ಸು), ನಗರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಜಿ. ಪ್ರವೀಣ್‌ಬಾಬು, ಪಿ.ಎಸ್.ಐ. ಪಶ್ಚಿಮ ಠಾಣೆ, ರಾಯಚೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ(3)ಪಿಆರ್:SL:06 ಓ.ಬಿ.:1948:07 ದಿ:06.02.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು:06:ಈವ:07 ಆ.ಪ್ರ.ಸಂ:512 ಈವ :07: ದಿನಾಂಕ:29.8.2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16.12.2007.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)2:2008–09, ದಿನಾಂಕ:27.5.2008.

**<u>ಪ್ರಸ್ತಾವನೆ:–</u>**

ಶ್ರೀ ಜಿ. ಪ್ರವೀಣ್‌ಬಾಬು, ಪಿ.ಎಸ್.ಐ. ಪಶ್ಚಿಮ ಠಾಣೆ, ರಾಯಚೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಜಿ. ಪ್ರವೀಣಬಾಬು, ಪಿ.ಎಸ್.ಐ., ಪಶ್ಚಿಮ ಠಾಣೆ: "ದಿನಾಂಕ;29.12.05 ಸಾಯಂಕಾಲ ಅಮರೇಶ್ವರ ಕ್ಯಾಂಪಿನ ಹತ್ತಿರ ಜರುಗಿದ ವಾಹನ ಅಪಘಾತಕ್ಕೆ ಸಂಬಂಧಿಸಿದಂತೆ ಸದರಿ ಘಟಣೆಯು ಮೋಟಾರು ಸೈಕಲ್ ಸವಾರನಿಂದಲೆ ಜರುಗಿರುವುದು ಕಂಡುಬಂದಿದ್ದರೂ ಗುನ್ನೆ ಸ್ಥಳದಲ್ಲಿದ್ದ ಸಾಕ್ಷಿದಾರರ ಮತ್ತು ಗುನ್ನೆಸ್ಥಳದ ಪರಿಶೀಲನೆಯಿಂದ ಸೂಕ್ತಕ್ರಮ ಜರುಗಿಸದೇ ಪ್ರಕರಣವನ್ನು ತುರುಚಿ ಲಾರಿ ಚಾಲಕನ ಮೇಲೆ ಗುನ್ನೆ ನಂ. 212:05ರ ಪ್ರಕಾರ ಗುನ್ನೆ ದಾಖಲು ಮಾಡಿಕೊಂಡು ಕರ್ತವ್ಯದಲ್ಲಿ ನಿರ್ಲಕ್ಷ್ಯತನವನ್ನು ತೋರಿಸಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:6.2.2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 29.8.2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ ಮೊಟಾರ್ ಬೈಕ್ ಸವಾರನು ದಿ:29.12.2005 ರಂದು ರಾತ್ರಿ ಸುಮಾರು 9.30 ಗಂಟೆ ಸಮಯದಲ್ಲಿ ಲಾರಿಗೆ ಡಿಕ್ಕಿ ಹೊಡೆದು ಮೃತಪಟ್ಟಿರುತ್ತಾನೆ. ಈ ಘಟನೆ ನಡೆದ ಸಂದರ್ಭದಲ್ಲಿ ಪ್ರತ್ಯಕ್ಷದರ್ಶಿ ಸಾಕ್ಷಿಗಳಾರು ಇರುವುದಿಲ್ಲ. ಈ ಬಗ್ಗೆ ಪ್ರಥಮ ವರ್ತಮಾನ ವರದಿಯನ್ನು ದಿ:30.12.2005 ರಂದು ಸಲ್ಲಿಸಲಾಗಿರುತ್ತದೆ. ಲಾರಿ ಚಾಲಕ ಸಿಗ್ನಲ್ ಲೈಟ್ ಹಾಕದೇ ಲಾರಿಯನ್ನು ನಿಲ್ಲಿಸಿದ್ದರಿಂದ ಮೋಟಾರ್ ಬೈಕ್ ಸವಾರ ಲಾರಿಗೆ ಡಿಕ್ಕಿ ಹೊಡೆದಿರುತ್ತಾನೆ ಎಂದು ಲಾರಿಚಾಲಕ ಮೇಲೆ ಮೊಕದ್ದಮೆ ದಾಖಲಿಸಲಾಗಿರುತ್ತದೆ. ಆದರೆ ಪ್ರಕರಣ ಸಂಭವಿಸಿದ ಸಂದರ್ಭದಲ್ಲಿ ಪ್ರತ್ಯಕ್ಷದರ್ಶಿಗಳಾರು ಇಲ್ಲದಿರುವುದರಿಂದ ಇದು ಸಂದೇಹಕ್ಕೆ ಎಡೆ ಮಾಡುತ್ತದೆ. ಆದ್ದರಿಂದ ಮೊಟಾರ್ ಬೈಕ್ ಸವಾರನ ಲಾರಿಗೆ ಹಿಂಬದಿಯಿಂದ ಡಿಕ್ಕಿ ಹೊಡೆದಿರುವುದರಿಂದ ಶೀಸ್ತುಪ್ರಾಧಿಕಾರ ತಿಳಿಸಿರುವಂತೆ ಲಾರಿಚಾಲಕನ ತಪ್ಪು ಕಂಡುಬರುವುದಿಲ್ಲ. ಹೀಗಿದ್ದರೂ ಶ್ರೀ ಜಿ. ಪ್ರವೀಣಬಾಬು ಪಿ.ಎಸ್.ಐ., ಇವರು ನಿರಪರಾಧಿಯನ್ನು ಅಪರಾಧಿ ಮಾಡಿ ಮೊಕದ್ದಮೆ ದಾಖಲುಮಾಡಿ ಕರ್ತವ್ಯಲೋಪವೆಸಗಿರುವುದು ಕಂಡುಬರುತ್ತದೆ. ಹೀಗಾಗಿ ಶಿಸ್ತಿಪ್ರಾಧಿಕಾರ ವಿಧಿಸಿರುವ ದಂಡನೆ ಸಮರ್ಥನೀಯವಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ದುರ್ನಡತೆ ಹಾಗು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 179 ಪೊಸಿಅ 2008 ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಜಿ. ಪ್ರವೀಣ್‌ಬಾಬು, ಪಿ.ಎಸ್.ಐ. ಪಶ್ಚಿಮ ಠಾಣೆ, ರಾಯಚೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಯು.ಎಸ್.ರಾಮೇಗೌಡ, ಹೆಚ್.ಸಿ.–153, ಕಡೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಪಿಆರ್/93/2006 ದಿ:06–12–2006
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ–3/14ಪವ/2007 ದಿನಾಂಕ:02–07–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–03–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)10:2008–09 ದಿನಾಂಕ:12–06–2008

**ಪ್ರಸ್ತಾವನೆ:**

ಶ್ರೀ. ಯು.ಎಸ್.ರಾಮೇಗೌಡ, ಹೆಚ್.ಸಿ.–153, ಕಡೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

> " ಶ್ರೀ.ಯು.ಎಸ್.ರಾಮೇಗೌಡ, ಆದ ನೀವು ಕಡೂರು ಪೊಲೀಸ್ ಠಾಣೆಯಲ್ಲಿ ಸಿ.ಹೆಚ್.ಸಿ–153, ಆಗಿ ಕರ್ತವ್ಯ ನಿರ್ವಹಿಸುತ್ತಿರುವಿರಿ. ನೀವು ಒಂದುವಾರ ಕಾಲ ಹಗಲು ಎಸ್.ಹಚ್.ಓ. ಕರ್ತವ್ಯದಲ್ಲಿದ್ದಾಗ ದಿನಾಂಕ:22–08–2006 ರಂದು ಯು.ಡಿ.ಆರ್. 34/2006 ಕಲಂ 174 ಸಿ.ಆರ್.ಪಿ.ಸಿ. ರೀತ್ಯಾ ಪ್ರಕರಣ ದಾಖಲಿಸಿದ್ದು, ಪ್ರಕರಣದ ಮೃತಳ ಮೈಮೇಲಿದ್ದ ನೀಲಿ ಬಣ್ಣದ ಕೆಂಪು ಮಿಶ್ರಿತ ಸೀರೆಯನ್ನು ಅಮಾನತ್ತುಪಡಿಸಿಕೊಂಡಿದ್ದು ಮಾಲುಪಟ್ಟಿ ನಂ:166/2006 ದಿ:22–08–2006ರಲ್ಲಿ ನಮೂದಿಸಿ ಕೊಂಡಿದ್ದು ದಿನಾಂಕ:29–08–2006ರ ವರೆಗೆ ಪಿ.ಎಫ್.ನಲ್ಲಿ ತಾಲ್ಲೂಕು ದಂಡಾಧಿಕಾರಿಗಳಿಂದ ಅನುಮತಿ ಪಡೆಯದೆ ಮೇಲಾಧಿಕಾರಿಗಳಿಗೆ ಹೇಳದೆ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ & ಬೇಜವಾಬ್ದಾರಿ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ ದಿ:06–12–2006ರ ಆದೇಶದಲ್ಲಿ ಅರ್ಜಿದಾರರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಎರಡು(2) ವರ್ಷಗಳ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿದಾರರಿಗೆ ವಿಧಿಸಿರುವ ಶಿಕ್ಷೆಯು ಅವರ ಮೇಲಿನ ಸಾಬೀತಾದ ದೋಷಾರೋಪಣೆಯ ಗುರುತ್ವಕ್ಕೆ ತಕ್ಕದಾಗಿರುತ್ತದೆಯೆಂದು ಹಾಗೂ ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 02–07–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರಾದ ಶ್ರೀ.ಯು.ಎಸ್.ರಾಮೇಗೌಡ, ಹೆಚ್.ಸಿ.–153, ಇವರು ಯು.ಡಿ.ಆರ್. ಪ್ರಕರಣದ ಸಂಖ್ಯೆ: 34/2006 ಕಲಂ 174 ಸಿ.ಆರ್.ಪಿ.ಸಿ. ರೀತ್ಯಾ ದಿ:22–08–2006ರಲ್ಲಿ ಪ್ರಕರಣವನ್ನು ದಾಖಲಿಸಿದ್ದು, ಮಾಲು ಪಟ್ಟಿಯಲ್ಲಿ ನಮೂದಿಸಿದ್ದ ಮೃತಳ ಮೈಮೇಲಿದ್ದ ನೀಲಿ ಬಣ್ಣದ ಕೆಂಪು ಮಿಶ್ರಿತ ಸೀರೆಯನ್ನು ಅಮಾನತ್ತು ಪಡಿಸಿಕೊಂಡಿದ್ದು, ದಿ: 22–08–2006 ರಿಂದ 29–08–2006 ರವರೆಗೆ ಪಿ.ಎಫ್.ನಲ್ಲಿ ತಾಲ್ಲೂಕು ದಂಡಕಾಧಿಕಾರಿಗಳ ಅನುಮತಿ ಪಡೆಯದಿರುವುದು ಹಾಗೂ ಮೇಲಾಧಿಕಾರಿಗಳಿಗೆ ತಿಳಿಸದಿರುವುದು ಇವರ ಮೇಲಿನ ಪ್ರಮುಖ ದೋಷಾರೋಪಣೆಯಾಗಿದೆ. ಶಿಸ್ತು ಪ್ರಾಧಿಕಾರಿಯಾದ ಎಸ್.ಪಿ. ಚಿಕ್ಕಮಗಳೂರು, ರವರು ಇವರ ಸಮಜಾಯಿಷಿಯನ್ನು ಪರಿಶೀಲಿಸಿ ಸದರಿ ಸಮಜಾಯಿಷಿಯಲ್ಲಿ ಬೇರೆಯವರನ್ನು ಸಿಕ್ಕಿಸಿಕೊಳ್ಳುವಂತೆ ಮಾಡಲು ಪ್ರಯತ್ನಿಸಿರುವುದು ದೃಢಪಟ್ಟಿರುವುದರಿಂದ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ 2ವರ್ಷಗಳ ಕಾಲ ದಿ:06–12–2006 ರಂದು ಮುಂದೂಡಿರುತ್ತಾರೆ. ಐ.ಜಿ.ಪಿ., ಪಶ್ಚಿಮ ವಲಯ, ಮಂಗಳೂರು ರವರು ಮೇಲ್ಮನವಿದಾರರಾದ ಶ್ರೀ.ಯು.ಎಸ್.ರಾಮೇಗೌಡ, ಇವರ ಮೇಲ್ಮನವಿಯನ್ನು ಯು.ಡಿ.ಆರ್. ಪ್ರಕರಣದಲ್ಲಿ ಬರೆದ ಪಿ.ಎಫ್. ವಿಳಂಬವಾಗಿ 29–08–2006 ರಂದು ತಾಲ್ಲೂಕು ಮ್ಯಾಜಿಸ್ಟ್ರೇಟ್ ರವರಿಂದ ಅನುಮತಿ ಪಡೆದಿರುವುದು ಸ್ವತ: ಮೇಲ್ಮನವಿದಾರರೇ ಒಪ್ಪಿಸಿಕೊಂಡಿರುವುದರಿಂದ ಹಾಗೂ ಸಾಬೀತಾದ ದೋಷಾರೋಪಣೆಗೆ ತಕ್ಕದಾದ ಶಿಕ್ಷೆಯನ್ನು ವಿಧಿಸಿರುವುದರಿಂದ ಇವರ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಈ ಪ್ರಕರಣದಲ್ಲಿ ದೋಷಾರೋಪಣೆಯು ಖಚಿತಗೊಂಡಿರುವುದರಿಂದ ಹಾಗೂ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಹೊಸ ಅಂಶಗಳು ಸಲ್ಲಿಸದಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 229 ಪೊಸಿಅ 2008 ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಯು.ಎಸ್.ರಾಮೇಗೌಡ, ಹೆಚ್.ಸಿ.–153, ಕಡೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್.ರವಿಪ್ರಕಾಶ್**

ಪಿ.ಆರ್. 1381

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ರೇವಣ್ಣ, ಪಿ.ಸಿ.–2647 ಮತ್ತು ಶ್ರೀ.ತಿಮ್ಮೇಗೌಡ, ಪಿ.ಸಿ.–4736, ಬೆಂಗಳೂರು ನಗರ, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ:84/ ಆರ್7/ಡಿಸಿಪಿ(ಕೇ)05 ದಿ:27–10–2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ:8/ಅಪೀಲು/2006 ದಿನಾಂಕ:26–04–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26–07–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)47:2007–08 ದಿನಾಂಕ:20–02–2008.

**ಪ್ರಸ್ತಾವನೆ:**

ಶ್ರೀ.ರೇವಣ್ಣ, ಪಿ.ಸಿ.–2647 ಮತ್ತು ಶ್ರೀ.ತಿಮ್ಮೇಗೌಡ, ಪಿ.ಸಿ.–4736, ಬೆಂಗಳೂರು, ಇವರುಗಳ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿತ್ತು.

**ದೋಷರೋಪಣೆ:**

"ಶ್ರೀ. ರೇವಣ್ಣ, ಪಿ.ಸಿ.–2647, ಸದಾಶಿವನಗರ ಪೊಲೀಸ್ ಠಾಣೆ, ಆದ ನೀವು ಸಂಜಯನಗರ ಪೊಲೀಸ್ ಠಾಣೆ ಮೊ.ಸಂ:153/05 ಕಲಂ 379 ಐ.ಪಿ.ಸಿ. ಕೇಸಿನಲ್ಲಿ ಬಂಧಿಯಾದ ಆರೋಪಿ ಗಳಾದ ಗೋಪಾಲ, ಮಹೇಶ, ರವಿ ಎಂಬ ಆರೋಪಿಗಳು ಜೇಬುಗಳ್ಳರಾಗಿದ್ದು, ಇವರನ್ನು ಬಂಧಿಸಿ ವಿಚಾರಣೆ ಮಾಡಿದಾಗ ಅವರ ಹೇಳಿಕೆಯಿಂದ ನೀವು ನಿಮ್ಮ ಠಾಣೆಯ ವ್ಯಾಪ್ತಿಯಲ್ಲಿ ಸದರಿ ಆರೋಪಿಗಳೊಂದಿಗೆ ಸಹಕರಿಸಿ ಜೇಬುಗಳ್ಳತನಕ್ಕೆ ಉತ್ತೇಜನ ನೀಡಿ ಅವರಿಂದ ಅಕ್ರಮ ಸಂಭಾವನೆ ಪಡೆದಿರುತ್ತೀರಿ. ಸಾರ್ವಜನಿಕರಿಗೆ ಕಳ್ಳರಿಂದ ರಕ್ಷಣೆ ನೀಡಬೇಕಾದ ನೀವು ಕಳ್ಳತನವನ್ನು ತಡೆಗಟ್ಟಲು ಪ್ರಯತ್ನಿಸದೆ ಜೇಬು ಗಳ್ಳರಿಗೆ ಸಹಕಾರ ನೀಡಿ ನಿಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

ಶ್ರೀ.ತಿಮ್ಮೇಗೌಡ, ಪಿ.ಸಿ.–4736, ಸದಾಶಿವನಗರ ಪೊಲೀಸ್ ಠಾಣೆ, ಆದ ನೀವು ಸಂಜಯ ನಗರ ಪೊಲೀಸ್ ಠಾಣೆ ಮೊ.ಸಂ:153/05 ಕಲಂ 379 ಐ.ಪಿ.ಸಿ. ಕೇಸಿನಲ್ಲಿ ಬಂಧಿಯಾದ ಆರೋಪಿಗಳಾದ ಗೋಪಾಲ, ಮಹೇಶ ಮತ್ತು ರವಿ ಎಂಬ ಆರೋಪಿಗಳು ಜೇಬುಗಳ್ಳರಾಗಿದ್ದು, ಇವರನ್ನು ಬಂಧಿಸಿ ವಿಚಾರಣೆ ಮಾಡಿದಾಗ ಅವರ ಹೇಳಿಕೆಯಿಂದ ನೀವು ನಿಮ್ಮ ಠಾಣೆಯ ವ್ಯಾಪ್ತಿಯಲ್ಲಿ ಸದರಿ ಆರೋಪಿಗಳೊಂದಿಗೆ ಸಹಕರಿಸಿ ಜೇಬುಗಳ್ಳತನಕ್ಕೆ ಉತ್ತೇಜನ ನೀಡಿ ಅವರಿಂದ ಅಕ್ರಮ ಸಂಭಾವನೆ ಪಡೆದಿರುತ್ತೀರಿ. ಸಾರ್ವಜನಿಕರಿಗೆ ಕಳ್ಳರಿಂದ ರಕ್ಷಣೆ ನೀಡಬೇಕಾದ ನೀವು ಕಳ್ಳತನವನ್ನು ತಡೆ ಗಟ್ಟಲು ಪ್ರಯತ್ನಿಸದೆ ಜೇಬುಗಳ್ಳರಿಗೆ ಸಹಕಾರ ನೀಡಿ ನಿಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 27–10–2005ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 6ತಿಂಗಳ ಕಾಲ ಮುಂದೂಡಿದ ಹಾಗೂ ಅಮಾನತ್ತಿನ ಅವಧಿ ದಿ:29-07–05 ರಿಂದ 10–10–05 ರವರೆಗೆ ಅಮಾನತ್ತೆಂದು ಪರಿಗಣಿಸುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರುಗಳ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರು ಮೇಲ್ಮನವಿದಾರರುಗಳ ವಿರುದ್ಧದ ಆರೋಪವು ಗಂಭೀರ ಸ್ವರೂಪವಾಗಿದ್ದು, ಮೇಲ್ಮನವಿ ದಾರರುಗಳು ತಮ್ಮ ಮೇಲ್ಮನವಿಗಳಲ್ಲಿ ಎತ್ತಿರುವ ಅಂಶಗಳು ಸಮರ್ಥನೀಯ ವಿರುವುದಿಲ್ಲವಾದ್ದರಿಂದ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಎತ್ತಿಹಿಡಿದು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 26–04–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಗಳಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ರೇವಣ್ಣ, ಪಿ.ಸಿ.–2647 ಮತ್ತು ಶ್ರೀ.ತಿಮ್ಮೇಗೌಡ, ಪಿ.ಸಿ.–4736, ಬೆಂಗಳೂರು, ಇವರುಗಳು ಸಂಜಯನಗರ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಜೇಬು ಗಳ್ಳತನದ ಆರೋಪಿಗಳೊಂದಿಗೆ ಸಹಕರಿಸಿ ಜೇಬುಗಳ್ಳತನಕ್ಕೆ ಉತ್ತೇಜನ ನೀಡಿ ಅವರಿಂದ ಅಕ್ರಮ ಸಂಭಾವನೆ ಪಡೆದಿರುವ ಹಾಗೂ ಸಾರ್ವಜನಿಕರಿಗೆ ಕಳ್ಳರಿಂದ ರಕ್ಷಣೆ ನೀಡಬೇಕಾದ ಇವರು ಕಳ್ಳತನವನ್ನು ತಡೆಗಟ್ಟಲು ಪ್ರಯತ್ನಿಸದೆ ಜೇಬುಗಳ್ಳರಿಗೆ ಸಹಾಯ ನೀಡಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುವ ಆಪಾದನೆಯ ಮೇಲೆ ಇವರ ಸಮಜಾಯಿಷಿಯು ತೃಪ್ತಿಕರವಾಗಿಲ್ಲವೆಂದು ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ 6ತಿಂಗಳ ಕಾಲ ಮುಂದೂಡಿ ಶಿಸ್ತು ಪ್ರಾಧಿಕಾರ ಹಾಗೂ ಡಿ.ಸಿ.ಪಿ. ಕೇಂದ್ರ ವಿಭಾಗ ರವರು ಆದೇಶಿಸಿರುತ್ತಾರೆ. ಇವರ ಮೇಲ್ಮನವಿಯನ್ನು ಮೇಲ್ಮನವಿ ಅಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಇವರು ತಿರಸ್ಕರಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿ ತಾವುಗಳು ನಿರ್ದೋಷಿ ಎನ್ನುವುದಕ್ಕೆ ಯಾವುದೇ ಪೂರಕ ದಾಖಲೆಗಳನ್ನಾಗಲಿ, ಹೊಸ ಅಂಶಗಳನ್ನು ಒದಗಿಸುವಲ್ಲಿ ಪರಿಷ್ಕರಣ ಮೇಲ್ಮನವಿದಾರರು ವಿಫಲರಾಗಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 66 ಪೊಸಿಅ 2008 ಬೆಂಗಳೂರು, ದಿನಾಂಕ:01ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ರೇವಣ್ಣ, ಪಿ.ಸಿ.–2647 ಮತ್ತು ಶ್ರೀ.ತಿಮ್ಮೇಗೌಡ, ಪಿ.ಸಿ.–4736, ಬೆಂಗಳೂರು, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಪಿ.ಆರ್. 1443

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಕೆ.ಎನ್.ಪತ್ತಾರ, ಸಿಪಿಸಿ–2049, ಗೋಕಾಕ್ (ಗ್ರಾ) ಪೊಲೀಸ್ ಠಾಣೆ ಮತ್ತು ಶ್ರೀ.ಎಂ.ಪಿ. ವಾಘಮೋರೆ, ಸಿಪಿಸಿ–1566, ಬೆಳಗಾವಿ ಜಿಲ್ಲೆ ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾಂ, ಇವರ ಆದೇಶ ಸಂಖ್ಯೆ:ಸಿಬ್ಬಂದಿ–2/ಇವಿ/19/2006 ಆ.ಪು.ಸಂ:621/2007 ದಿನಾಂಕ:19–06–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರ ಆದೇಶ ಸಂಖ್ಯೆ:ಅಪೀಲು/ 178/ಉವ/2007 ದಿನಾಂಕ:03–12–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–02–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)139/2007–08 ದಿನಾಂಕ:30–04–2008

**ಪ್ರಸ್ತಾವನೆ:**

ಶ್ರೀ.ಕೆ.ಎನ್.ಪತ್ತಾರ, ಸಿಪಿಸಿ–2049, ಗೋಕಾಕ್ (ಗ್ರಾ) ಪೊಲೀಸ್ ಠಾಣೆ ಮತ್ತು ಶ್ರೀ.ಎಂ.ಪಿ.ವಾಘಮೋರೆ, ಸಿಪಿಸಿ–1566, ಬೆಳಗಾವಿ ಜಿಲ್ಲೆ ಇವರುಗಳ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆ 8ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿಗಳಾದ ಸಿ.ಪಿ.ಸಿ.–1566 ಶ್ರೀ.ಎಂ.ಪಿ.ವಾಘಮೋರೆ, ಮೂಡಲಗಿ ಪೊ.ಠಾ. ಮತ್ತು ಸಿಪಿಸಿ–2049 ಶ್ರೀ.ಕೆ.ಎನ್.ಪತ್ತಾರ, ಗೋಕಾಕ ಪೊಲೀಸ್ ಠಾಣೆ, ನೀವುಗಳು ಗೋಕಾಕದಲ್ಲಿಯ ಹೆಚ್ಚುವರಿ ಜೆ.ಎಂ.ಎಫ್.ಸಿ ನ್ಯಾಯಾಲಯದ ಸಿ.ಸಿ.ನಂ:1187/2004 ನೇದ್ದರಲ್ಲಿ ಆರೋಪಿತರಾಗಿದ್ದು, ಸದರಿ ಪ್ರಕರಣವು ದಿ:16–09–2006 ರಂದು ನ್ಯಾಯಾಲಯದ ವಿಚಾರಣೆಯಲ್ಲಿದ್ದುದರಿಂದ ನಿಮ್ಮ ವಿರುದ್ಧ ಸಾಕ್ಷಿ ನುಡಿಯಲು ಬಂದ ಸಾಕ್ಷಿದಾರ ಬಸಪ್ಪ ಸತ್ಯೆಪ್ಪ ವಾಳಕೆ, ಸಾ:ಮೂಡಲಗಿ ಇವರು ನ್ಯಾಯಾಲಯಕ್ಕೆ ಹಾಜರಾಗಿ ತನ್ನ ಹಾಜರಾತಿ ನೀಡಿ ನ್ಯಾಯಾಲಯದ ಆವರಣದಲ್ಲಿಯ ಗಿಡದ ಕಟ್ಟೆಯ ಮೇಲೆ ಕುಳಿತಾಗ ಸುಮಾರು 11.30 ಘಂಟೆಗೆ ನಿಮ್ಮ ಮೇಲಾಧಿಕಾರಿಗಳ ಅನುಮತಿ ಪಡೆಯದೆ ನ್ಯಾಯಾಲಯಕ್ಕೆ ಹೋಗಿ ಸದರಿ ಸಾಕ್ಷೀದಾರರನ್ನು ನೀನು ನಮ್ಮ ವಿರುದ್ಧ ಸಾಕ್ಷಿ ನುಡಿಯಲು ಬಂದಿರುತ್ತಿ ಅಂತಾ ಅವಾಚ್ಯ ಶಬ್ದಗಳಿಂದ ಬೈದು ಅವನಿಗೆ ಅಡ್ಡಗಟ್ಟಿ ಅವನ ಎದೆಯ ಮೇಲಿನ ಅಂಗಿ ಹಿಡಿದು ಎಳೆದಾಡಿ, ಕೈಯಿಂದ ಹೊಡಿ–ಬಡಿ ಮಾಡಿ ರಿಕ್ಷಾದಲ್ಲಿ ಗೋಕಾಕ್ ಶಹರ ಪೊಲೀಸ್ ಠಾಣೆಗೆ ಕರೆದುಕೊಂಡು ಬಂದು ಅಕ್ರಮ ಬಂಧನದಲ್ಲಿಟ್ಟು ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾಂ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19–06–2007ರ ಆದೇಶದಲ್ಲಿ ಅರ್ಜಿದಾರರರಿಗೆ ಸಿ.ಪಿ.ಸಿ. ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಇಳಿಸಿ, ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವುದು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರು ಅರ್ಜಿದಾರರುಗಳ ಮೇಲ್ಮನವಿಯನ್ನು ಭಾಗಶ: ಮಾರ್ಪಡಿಸಿ, ಸಿಪಿಸಿ ಹುದ್ದೆಯ ಕನಿಷ್ಠ ವೇತನಕ್ಕೆ ಎರಡು ವರ್ಷಗಳ ಕಾಲ ಇಳಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 03–12–2007ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿನ ಅಂಶಗಳು ಸಮರ್ಥನೀಯವಾಗಿರುವುದಿಲ್ಲ ಹಾಗೂ ಆರೋಪಕ್ಕೆ ಅನುಗುಣವಾಗಿಯೇ ದಂಡನೆಯನ್ನು ವಿಧಿಸಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲ ವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 174 ಪೊಸಿಅ 2008 ಬೆಂಗಳೂರು, ದಿನಾಂಕ:16ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಕೆ.ಎನ್.ಪತ್ತಾರ, ಸಿಪಿಸಿ–2049, ಗೋಕಾಕ್ (ಗ್ರಾ) ಪೊಲೀಸ್ ಠಾಣೆ ಮತ್ತು ಶ್ರೀ.ಎಂ.ಪಿ.ವಾಘಮೋರೆ, ಸಿಪಿಸಿ–1566, ಬೆಳಗಾವಿ ಜಿಲ್ಲೆ ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1551

**ವಿಷಯ:** ಶ್ರೀ.ಹೆಚ್.ಬಿ.ರಮೇಶ್, ಪಿ.ಎಸ್.ಐ., ಸಖರಾಯಪಟ್ಟಣ, ಚಿಕ್ಕಮಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ:(2)/99/2007 ದಿ:10–08–2007
2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ(1)213/2007–08 ದಿನಾಂಕ:15–03–2008
3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02–05–2008

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)26:2008–09 ದಿನಾಂಕ:18–07–2008.

**ಪ್ರಸ್ತಾವನೆ:**

ಶ್ರೀ.ಹೆಚ್.ಬಿ.ರಮೇಶ್, ಪಿ.ಎಸ್.ಐ., ಸಖರಾಯಪಟ್ಟಣ, ಚಿಕ್ಕಮಗಳೂರು ಜಿಲ್ಲೆ, ಇವರು ದಿ:08–06–2007 ರಿಂದ 17–06–2007ರ ವರೆಗೆ 10ದಿನಗಳ ರಜೆಯನ್ನು ಮಂಜೂರು ಮಾಡಿಸಿಕೊಂಡಿದ್ದು, ದಿ:18–06–2007 ರಂದು ಕರ್ತವ್ಯಕ್ಕೆ ಹಾಜರಾಗಬೇಕಿತ್ತು ಆದರೆ ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿಯನ್ನು ನೀಡದೆ ಅನಧಿಕೃತವಾಗಿ ಗೈರುಹಾಜರಾಗಿದ್ದಾರೆ.

ದಿ:12–07–2007 ರಂದು ರಜೆ ಅರ್ಜಿ ಸಲ್ಲಿಸಿ, ದಿ:18–06–2007 ರಿಂದ 14–07–2007ರವರೆಗೆ ಒಟ್ಟು 27ದಿನಗಳ ಗಳಿಕೆರಜೆ ಮಂಜೂರಾತಿಗಾಗಿ ಮೇಲಾಧಿಕಾರಿಗಳ ಮೂಲಕ ರಜಾ ಅರ್ಜಿ ಸಲ್ಲಿಸಿದ್ದು, ಸದರಿ ರಜಾ ಅರ್ಜಿಯ ಮೇಲೆ ಪೊಲೀಸ್ ವೃತ್ತ ನಿರೀಕ್ಷಕರು, ಕಡೂರು ವೃತ್ತ, ಇವರು ಸದರಿ ಅಧಿಕಾರಿಯು ದಿ:17–06–2007 ರಿಂದ ಆರಾಮವಾಗಿ ತಿರುಗಾಡಿ ಕೊಂಡಿದ್ದಾರೆಂದು, ತೆಗೆದುಕೊಂಡ ಚಿಕಿತ್ಸೆ ವಿವರವಾಗಲಿ ಜಿಲ್ಲಾ ಸರ್ಜನ್‌ರಿಂದ ದೃಢೀಕರಣ ಹಾಜರುಪಡಿಸದೇ ಇರುವುದರಿಂದ 27 ದಿನಗಳನ್ನು "ವೇತನರಹಿತ ರಜೆ" ಎಂದು ಪರಿಗಣಿಸಲು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರು ದಿ:18–06–2007 ರಿಂದ 14–07–2007ರವರೆಗೆ ಓದಲಾದ (1)ರ ಆದೇಶದಲ್ಲಿ 'ವೇತನರಹಿತ ರಜೆ' ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 15–03–2008ರ ಆದೇಶದಲ್ಲಿ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಇವರ ಆದೇಶವನ್ನು ದೃಢೀಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆ ಗಳನ್ನು ಪರಿಶೀಲಿಸಲಾಗಿದೆ. ಶ್ರೀ.ಹೆಚ್.ಬಿ.ರಮೇಶ್, ಪಿ.ಎಸ್.ಐ., ಇವರು ವೈದ್ಯಕೀಯ ಕಾರಣಗಳ ಮೇರೆಗೆ ದಿ:08–06–2007 ರಿಂದ 17–06–2007ರವರೆಗೆ ಹತ್ತು ದಿನಗಳ ರಜೆ ಮಂಜೂರು ಮಾಡಿಸಿಕೊಂಡು ಚಿಕಿತ್ಸೆ ಪಡೆದಿರುವರು. ಇದಾದ ತರುವಾಯ ಇವರು ಕರ್ತವ್ಯಕ್ಕೆ ಹಾಜರಾಗದೆ ದಿ:18–06–2007 ರಿಂದ 14–07–2007ರವರೆಗೆ ಅನಧಿಕೃತ ಗೈರು ಹಾಜರಾಗಿರುವರು. ಸದರಿ ಅನಧಿಕೃತ ಗೈರುಹಾಜರಿಯ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, ನಿಯಮ–106ಎ ಪ್ರಕಾರ ವೇತನ ರಹಿತ ರಜೆಯನ್ನಾಗಿ ಪರಿಗಣಿಸಲಾಗಿದೆ. ಅಪೀಲು ಪ್ರಾಧಿಕಾರವು ಸಹ ಇದನ್ನೇ ದೃಢೀಕರಿಸಿರುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಗಳು, ನಿಯಮ 107ರ ಪ್ರಕಾರ ರಜೆಯನ್ನು ಹಕ್ಕೆಂಬಂತೆ ಕೋರುವಂತಿಲ್ಲ. ಸರ್ಕಾರಿ ಸೇವೆಯ ಅಗತ್ಯತೆಗನುಸಾರವಾಗಿ ಯಾವುದೇ ಕಾಲಕ್ಕೆ ರಜೆಯನ್ನು ರದ್ದುಗೊಳಿಸುವ ಅಥವಾ ನಿರಾಕರಿಸುವ ವಿವೇಚನೆಯು, ರಜೆಯನ್ನು ಮಂಜೂರು ಮಾಡಲು ಅಧಿಕಾರವುಳ್ಳ ಅಧಿಕಾರಿಯ ವಿವೇಚನೆಗೆ ಸೇರಿದ್ದಾಗಿರುತ್ತದೆ. ಹೀಗಿರುವುದರಿಂದ ರಜೆಯನ್ನು ಮಂಜೂರು ಮಾಡಲು ಅಧಿಕಾರವುಳ್ಳ ಅಧಿಕಾರಿಯ ತೀರ್ಮಾನದ ಬಗ್ಗೆ ಹಸ್ತಕ್ಷೇಪ ಮಾಡುವುದು ಸೂಕ್ತವಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 235 ಪೊಸಿಅ 2008 ಬೆಂಗಳೂರು, ದಿನಾಂಕ:03ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ.ಹೆಚ್.ಬಿ.ರಮೇಶ್, ಪಿ.ಎಸ್.ಐ., ಸಖರಾಯಪಟ್ಟಣ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ರವಿಪ್ರಕಾಶ್**

ಪಿ.ಆರ್. 1552

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಎಸ್.ಆರ್.ಹೊನಕುಪ್ಪಿ, ಎಪಿಸಿ–866, ಡಿ.ಎ.ಆರ್. ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾಂ, ಇವರ ಆದೇಶ ಸಂಖ್ಯೆ:ಸಿಬ್ಬಂದಿ–2/ಇವಿ/16/2006 ಆ.ಪು.ಸಂ:620/2007 ದಿನಾಂಕ:19–06–2007

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಬೆಳಗಾಂ, ಇವರ ಆದೇಶ ಸಂಖ್ಯೆ:ಅಪೀಲು/172/ಉವ/2007 ದಿನಾಂಕ:15–12–2007

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–03–2008

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)9/2007–08 ದಿನಾಂಕ:24–06–2008

**ಪ್ರಸ್ತಾವನೆ:**

ಶ್ರೀ.ಎಸ್.ಆರ್.ಹೊನಕುಪ್ಪಿ, ಎಪಿಸಿ–866, ಡಿ.ಎ.ಆರ್. ಬೆಳಗಾವಿ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆ 8ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ಎಪಿಸಿ ಬ.ನಂ.866 ಎಸ್.ಆರ್.ಹೊನಕುಪ್ಪಿ

1) ದಿ:11–08–2006 ರಂದು ಶಿಕ್ಷಾ ಬಂದಿ ಖೈದಿ ಸಂ:00072 ಯಲ್ಲಪ್ಪ ಕುರಬರ ಸಾ:ಹಾನಗಲ ಈತನನ್ನು ಹುನಗುಂದದ ಸಿಜೆಎಮ್ ಮತ್ತು ಜೆಎಮ್ಎಫ್‌ಸಿ ನ್ಯಾಯಾಲಯಕ್ಕೆ ಹಾಜರ ಪಡಿಸಿ ಅಲ್ಲಿಂದ ಕರೆದುಕೊಂಡು ಬರುವಾಗ ನೇರವಾಗಿ ಅವನಿಗೆ ಹುನಗುಂದದಿಂದ ಬೆಳಗಾವಿಗೆ ಕರೆದುಕೊಂಡು ಬರದೆ, ಹುನಗುಂದದಿಂದ ಇಳಕಲ್, ಇಳಕಲಿಂದ ಹುಬ್ಬಳ್ಳಿ ಹಾಗೂ ಹುಬ್ಬಳ್ಳಿಯಿಂದ ಬೆಳಗಾವಿಗೆ ಕರೆದುಕೊಂಡು ಬಂದು ನೀವು ನಿಮ್ಮ ಬೆಂಗಾವಲು ಕರ್ತವ್ಯದಲ್ಲಿ ಚ್ಯುತಿ ಎಸಗಿರುತ್ತೀರಿ.

2) ಇದು ಅಲ್ಲದೇ, ಹುನಗುಂದದಿಂದ ಸದರಿ ಖೈದಿ ಸಂ:00072 ಯಲ್ಲಪ್ಪ ಕುರಬರ ಸಾ:ಹಾನಗಲ ಈತನಿಗೆ ಬೆಂಗಾವಲಿನಲ್ಲಿ ಕರೆದುಕೊಂಡು ಬರುವಾಗ ಹುನಗುಂದದಿಂದ ಗದಗವರೆಗೆ ಆತನ ಸಹ ಖೈದಿ ಹಣಮಂತ ಸಾ:ಬಾಗಲಕೋಟ ಈತನಿಗೆ ಸಂಗಡ ಬರಲು ಹಾಗೂ ಅವನ ಮನೆಯವರ ಕಡೆಯಿಂದ ರೂ.500/– ಹಣ ಪಡೆದುಕೊಳ್ಳಲು ಅನುವು ಮಾಡಿಕೊಟ್ಟು ನೀವು ನಿಮ್ಮ ಬೆಂಗಾವಲು ಕರ್ತವ್ಯದಲ್ಲಿ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ.

3) ಸದರಿ ಶಿಕ್ಷಾ ಬಂದಿ ಖೈದಿಯನ್ನು ಬೆಂಗಾವಲಿನಲ್ಲಿ ನಿಯಮದ ಮೇರೆಗೆ ಬಸ್ಸಿನಲ್ಲಿ ನಿಮ್ಮ ಪಕ್ಕದಲ್ಲಿ ಕೂಡ್ರಿಸಿಕೊಂಡು ಬರದೆ, ಇಳಕಲ್‌ದಿಂದ ಹುಬ್ಬಳ್ಳಿಗೆ ಬರುವಾಗ ಶಿಕ್ಷಾ ಬಂದಿ ಖೈದಿಯನ್ನು ಒಂದು ಸೀಟಿನ ಕೊನೆಯಲ್ಲಿ, ಅದೆ ಸೀಟಿನ ಇನ್ನೊಂದು ಕೊನೆಯಲ್ಲಿ ಒಬ್ಬರು ಮತ್ತು ಹಿಂದಿನ ಸೀಟಿನಲ್ಲಿ ಒಬ್ಬರು ಹೀಗೆ ಆರೋಪಿಯನ್ನು ಬಿಟ್ಟು ಬೇರೆ ಬೇರೆಯಾಗಿಕುಳಿತುಕೊಂಡು ಸದರಿ ಖೈದಿಗೆ ಆತನ ಮುಂದಿನ ಆಸನದಲ್ಲಿ ಕುಳಿತ ವ್ಯಕ್ತಿಯ ಜೇಬಿನಿಂದ ರೂ.10,000/–ಗಳನ್ನು ಕಳ್ಳತನ ಮಾಡಲು ಅನುವು ಮಾಡಿಕೊಟ್ಟು, ನಿಮಗೆ ನಿಯೋಜಿಸಿದ ಬೆಂಗಾವಲು ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸದೇ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾಂ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19–06–2007ರ ಆದೇಶದಲ್ಲಿ ಅರ್ಜಿದಾರರರಿಗೆ ಎ.ಪಿ.ಸಿ. ಹುದ್ದೆಯ ಕನಿಷ್ಠ ಮೂಲವೇತನಕ್ಕೆ ಇಳಿಸಿ, ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವುದು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಬೆಳಗಾಂ, ಇವರು ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ 2ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 15–12–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಹೊಸ ಸಮರ್ಥನೆಗಳು ಇರುವುದಿಲ್ಲವಾದ್ದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 264 ಪೊಸಿಅ 2008 ಬೆಂಗಳೂರು, ದಿನಾಂಕ:10ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಎಸ್.ಆರ್.ಹೊನಕುಪ್ಪಿ, ಎಪಿಸಿ–866, ಡಿ.ಎ.ಆರ್. ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1553

**INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT**

**Sub :** Approval of the Project proposal of M/s POORNIMADEVI TECH PARK PVT LTD., No. 70/2 Mariyappana Palya, Kengari Hobli, Bangalore University, Bangalore South for establishment of SEZ for IT/ITES at Sulikere Village Kengeri Hobli, Bangalore South Taluk.

**Read :** Proceedings of the 15th State High Level Clearance Committee (SHLCC) meeting held on 21.8.2008.

**Preamble:**

I) **M/s POORNIMADEVI TECH PARK PVT LTD.**, is Private Limited company, incorporated under Indian Companies Act, 1956 on 5th February 2008, in Bangalore.

The main objectives of the company is to promote, create, construct, build, start, establish acquire, conduct, manage, maintain, develop conceptualize, design sponsor, run, engage, operate, assist, implement, coordinate and to setup the business of building, developing and running all kinds of technology parks designed and built to suit the requirement of nation and international firms, individuals, companies and organizations operating in the field of information technilogy, software development, electronics, telecomnuications, research and development in various fields biotech industries, technology-oriented industry, financial service industry.

The present proposal of the company is to establish a ``**SEZ** for IT/ITES'' in 32 acres 16 guntas of land taken on lease by the company,. at different Sy. Nos of Sulikere Village, Kengari Hobli , Bangalore South Taluk with an investment of Rs. 238.78 crores, and provide employment to about 14.260 persons.

In the 15th SHLCC Meeting held on 21.8.2008 the proposal was discussed in detail, the proposal has been approved.

Government has examined the recommendations of the SHLCC Hence the following order:

**Government Order No.ITD :66:MDA (3): 2008, Bangalore, Dated:19th November 2008**

In the circumstances explained in the preamble, the Government are pleased to accord approval to **M/s POORNIMADEVI TECH PARK PVT. LTD**, for establishment of SEZ for IT/ITES in 32 acres 16 guntas of land taken on lease by the company, at different Sy. Nos. of Sulikere Village, Kengari Hobli, Bangalore SOuth Taluk with the following facilities and incentives.

**INFRASTRUCTURE FACILITIES:**

**LAND:** The Committee resolved to permit the company to establish the facilities, **in 32 acres 16 guntas of land** taken on lease by the company, at 41/1A2, 42/1A, 42/2A, 42/2B,42/3,43, 44/2 of Sulikere Village Kengari, Hobli, Bangalore South Taluk which falls under hi-tech zone as per Master Paln of 2015 of BDA, The company shall obtain prior approval from Bangalore Development Authority for the plan before starting any civil works.

**POWER:** 5000 KVA to be serviced by BESCOM

**WATER:** 05. MLD to be met from own bore wells, 0.20 MLD from rainwater harvesting and 0.30 MLD from recycled water. The unit to minimize the usage of water and shall establish structure/facility for rainwater harvesting and ground water recharge. Conducting an annual ``Water Audit'' is also recommended.

**Environmental:** The promoters to obtain CFE and CFO from KSPCB and environmental clearance from MOEF. GOL No. works shall commence prior to obtaining EC as per prevailing law.

**INCENTIVES & CONCESSIONS**:

As per Millennium IT policy and SEZ policy of GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. Acopy of the vendor development plan shall be sent to the Director of IT & Biotechnilogy for monitoring.

**Social Infrastructure Development:** The Company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Others:**

The Promoter shall take all statutory and other necessary clearances and shall submit milestones/progress in implementation of the project regularly, which will be monitored by the Departments concerned.

By order and in the name of the Governor of Karnataka,

**M.V. KRISHNAMURTHY**

Under Secretary to Government

Information Technology, Biotechnology and Science & Technology Department.

P.R. 1653

**ಒಳಾಡಳಿತ ಸಚಿವಾಲಯ**

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಹಲವು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ ಸಹಾಯಕ ಅಭಿಯೋಗ ನಿರ್ದೇಶಕರುಗಳ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ನಂ ಒಇ 25 ಪಿಪಿಇ 2004, ದಿನಾಂಕ:21.7.2005.
2 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ. ಡಿಪಿಎನ್.ಸಿಶಾ–1/38/2008–09 ದಿನಾಂಕ:5.6.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:21.7.2005ರ ಅಧಿಸೂಚನೆಯಲ್ಲಿ ಈ ಕೆಳಕಂಡ 22 ಸಹಾಯಕ ಸರ್ಕಾರಿ ಅಭಿಯೋಜಕರುಗಳಿಗೆ ಇತರೆ 5 ಅಧಿಕಾರಿಗಳೊಂದಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ ಸಹಾಯಕ ಅಭಿಯೋಗ ನಿರ್ದೇಶಕರಾಗಿ ಸ್ಥಾನಪನ್ನಾವಧಿಯ ಮೇಲೆ ಮುಂಬಡ್ತಿ ನೀಡಲಾಗಿತ್ತು.

| ಕ್ರ. ಸಂ | ಹೆಸರು ಶ್ರೀ/ಶ್ರೀಮತಿ | ಕ್ರ. ಸಂ. | ಹೆಸರು ಶ್ರೀ/ಶ್ರೀಮತಿ |
|---|---|---|---|
| 1 | ಎ.ಬಿ. ದಿನಕರ್ | 2 | ಆರ್.ಕೆ. ಭಟ್ |
| 3 | ಜೆ.ಎನ್. ದೇಸಾಯಿ | 4 | ವಿ.ಎಸ್. ಭಟ್ |
| 5 | ವಾಗೀಶ್ ವಿ. ಹಿರೇಮಠ | 6 | ಎನ್.ಎಸ್. ಪಾಟೀಲ್ |
| 7 | ಜೆ.ಹೆಚ್. ಅಮೃತ್ ಕುಮಾರ್ | 8 | ಎಂ.ಆರ್. ಬನ್ನಿಹಟ್ಟಿ |
| 9 | ವಿ.ಜಿ ಬಂಡಿ | 10 | ಎಸ್. ಬಷೀರ್ ಅಹ್ಮದ್ |

| 11 | ಬಿ. ಜಯರಾಂ | 12 | ಅಂಜನಾ ಚವಾಣ್ |
|---|---|---|---|
| 13 | ಅಂಜಲೀದೇವಿ | 14 | ಡಿ. ರಮೇಶ್ ಬಾಬು |
| 15 | ಹೆಚ್.ಎಂ. ರಘುಕುಮಾರ್ | 16 | ಬಿ.ವೈ. ಕೆಂಬಾವಿ |
| 17 | ಬಿ.ಎಂ. ನಾಗರಾಜು | 18 | ಜಿ. ಸುದರ್ಶನ್ |
| 19 | ಲಕ್ಷ್ಮೀಬಾಯಿ ಎಂ. ಯಳಸಂಗೀಕರ್ | 20 | ಎಸ್.ಆರ್. ಶಿಂಧೆ |
| 21 | ಮಹಾಂತಪ್ಪ | 22 | ಎಸ್.ಎಸ್. ಲೋಕೂರ್ |

ಮೇಲೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ:5.6.2008ರ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ ಸರ್ಕಾರಿ ಅಭಿಯೋಜಕರ/ ಅಭಿಯೋಗ ಉಪನಿರ್ದೇಶಕರ ಹುದ್ದೆಗಳನ್ನು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ವೃಂದದಿಂದ ಬಡ್ತಿ ಮೂಲಕ ಭರ್ತಿ ಮಾಡುವ ಸಲುವಾಗಿ ಮೇಲ್ಕಂಡ 22 ಅಧಿಕಾರಿಗಳ ಸ್ಥಾನಪನ್ನ ಅವಧಿಯನ್ನು ಘೋಷಿಸಬೇಕಿದ್ದು, ಸದರಿ ಅಧಿಕಾರಿಗಳಿಗೆ ಸಂಬಂಧಿಸಿದಂತೆ 2005–06 ಮತ್ತು 2006–07ನೇ ಸಾಲುಗಳ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇಲ್ಲದೇ ಇದ್ದು, ಇವರುಗಳ ಸೇವೆಯು ಸ್ಥಾನಪನ್ನ ಅವಧಿಯಲ್ಲಿ ತೃಪ್ತಿಕರವಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 19(3)(ಸಿ) ಪ್ರಕಾರ ಸದರಿ ಅಧಿಕಾರಿಗಳ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 257 ಪಿಪಿಇ 2008, ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 19(3)(ಸಿ) ಪ್ರಕಾರ ಈ ಕೆಳಕಂಡ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಸಹಾಯಕ ಅಭಿಯೋಗ ನಿರ್ದೇಶಕರುಗಳ ಹೆಸರಿನ ಮುಂದೆ ಅಂಕಣ (5)ರಲ್ಲಿ ನಮೂದಿಸಲಾಗಿರುವ ದಿನಾಂಕದಿಂದ ಅವರುಗಳ ಸ್ಥಾನಪನ್ನ ಅವಧಿ ತೃಪ್ತಿಕರವಾಗಿದೆಯೆಂದು ಘೋಷಿಸಲಾಗಿದೆ.

| ಕ್ರ. ಸಂ | ಅಧಿಕಾರಿಗಳ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರುಗಳ ಹುದ್ದೆಗೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯವಾದ ದಿನಾಂಕ | ಸ್ಥಾನಪನ್ನ ಅವಧಿ ತೃಪ್ತಿಕರವೆಂದು ಘೋಷಿಸುವ ದಿನಾಂಕ |
|---|---|---|---|---|
| 1 | ಎ.ಬಿ. ದಿನಕರ್, 7ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 10.8.2005 ಪೂರ್ವಾಹ್ನ | 9.8.2006 | 10.8.2006 |
| 2 | ಆರ್.ಕೆ. ಭಟ್, ಸಿಜೆಎಂ ನ್ಯಾಯಾಲಯ, ತುಮಕೂರು | 9.8.2005 ಪೂರ್ವಾಹ್ನ | 8.8.2006 | 9.8.2006 |
| 3 | ಜೆ.ಎನ್. ದೇಸಾಯಿ, 10ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 11.8.2005 ಪೂರ್ವಾಹ್ನ | 10.8.2006 | 11.8.2006 |
| 4 | ವಿ.ಎಸ್. ಭಟ್, 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 12.8.2005 ಪೂರ್ವಾಹ್ನ | 11.8.2006 | 12.8.2006 |
| 5 | ವಾಗೀಶ್ ವಿ. ಹಿರೇಮಠ, 2ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 10.8.2005 ಪೂರ್ವಾಹ್ನ | 9.8.2006 | 10.8.2006 |
| 6 | ಎನ್.ಎಸ್. ಪಾಟೀಲ್, ಸಿಜೆಎಂ ನ್ಯಾಯಾಲಯ, ಬಿಜಾಪುರ | 12.8.2005 ಅಪರಾಹ್ನ | 12.8.2006 | 13.8.2006 |

| | | | | |
|---|---|---|---|---|
| 7 | ಬಿ.ಹೆಚ್. ಅಮೃತ್ ಕುಮಾರ್, 1ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 10.8.2005 ಪೂರ್ವಾಹ್ನ | 9.8.2006 | 10.8.2006 |
| 8 | ಎಂ.ಆರ್. ಬನ್ನಿಹಟ್ಟಿ, 5ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 29.7.2005 ಅಪರಾಹ್ನ | 29.7.2006 | 30.7.2006 |
| 9 | ವಿ.ಜಿ. ಬಂಡಿ, (ನಿಯೋಜನೆ ಮೇರೆಗೆ) ಎಸ್.ಪಿ. ಕಛೇರಿ, ಶಿವಮೊಗ್ಗ | 29.7.2005 ಅಪರಾಹ್ನ | 29.7.2005 | 30.7.2006 |
| 10 | ಎಸ್. ಬಷೀರ್ ಅಹ್ಮದ್ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಗುಲ್ಬರ್ಗ ವಿಭಾಗ, ಗುಲ್ಬರ್ಗ | 3.8.2005 ಪೂರ್ವಾಹ್ನ | 2.8.2006 | 3.8.2006 |
| 11 | ಬಿ. ಜಯರಾಂ ಸಿಜೆಎಂ ನ್ಯಾಯಾಲಯ, ಚಿತ್ರದುರ್ಗ | 18.8.2005 ಪೂರ್ವಾಹ್ನ | 17.8.2006 | 18.8.2006 |
| 12 | ಅಂಜನಾ ಚವಾಣ್ ಸಿಜೆಎಂ ನ್ಯಾಯಾಲಯ, ಬೀದರ್ | 1.8.2005 ಪೂರ್ವಾಹ್ನ | 31.8.2006 | 1.8.2006 |
| 13 | ಅಂಜಲೀದೇವಿ, ಸಿಜೆಎಂ ನ್ಯಾಯಾಲಯ, ಕೊಪ್ಪಳ | 1.9.2005 ಪೂರ್ವಾಹ್ನ | 31.8.2006 | 1.9.2006 |
| 14 | ಡಿ. ರಮೇಶ್ ಬಾಬು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ನಿಯೋಜನೆ ಮೇರೆಗೆ ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು | 12.8.2005ಪೂರ್ವಾಹ್ನ | 11.8.2006 | 12.8.2006 |
| 15 | ಹೆಚ್.ಎಂ. ರಘುಕುಮಾರ್, ಎಸ್.ಪಿ. ಕಛೇರಿ, ಮೈಸೂರು | 12.8.2005 ಪೂರ್ವಾಹ್ನ | 11.8.2006 | 12.8.2006 |
| 16 | ಬಿ.ವೈ. ಕೆಂಬಾವಿ, 3ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು | 8.8.2005 ಪೂರ್ವಾಹ್ನ | 7.8.2006 | 8.8.2006 |
| 17 | ಬಿ.ಎಂ. ನಾಗರಾಜು ಪೊಲೀಸ್ ಅಧೀಕ್ಷಕರ ಕಛೇರಿ, ಕೆ.ಜಿ.ಎಫ್. | 26.8.2005 ಪೂರ್ವಾಹ್ನ | 25.8.2006 | 26.8.2006 |
| 18 | ಜಿ. ಸುದರ್ಶನ್, ಸಿಜೆಎಂ ನ್ಯಾಯಾಲಯ, ರಾಯಚೂರು | 8.8.2005 ಪೂರ್ವಾಹ್ನ | 7.8.2006 | 8.8.2006 |
| 19 | ಲಕ್ಷ್ಮೀಬಾಯಿ ಎಂ. ಯಳಸಂಗೀಕರ್ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ನಿಯೋಜನೆ ಮೇರೆಗೆ ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ, ಕಛೇರಿ, ಬೆಂಗಳೂರು | 3.9.2005 ಅಪರಾಹ್ನ | 3.9.2006 | 4.9.2006 |

| | | | | |
|---|---|---|---|---|
| 20 | ಎಸ್.ಆರ್. ಶಿಂಧೆ, ಪೊಲೀಸ್ ಅಧೀಕ್ಷಕರ ಕಛೇರಿ, ಬಿಜಾಪುರ | 10.8.2005 ಪೂರ್ವಾಹ್ನ | 9.8.2006 | 10.8.2006 |
| 21 | ಮಹಾಂತಪ್ಪ, 1ನೆ ಸಿಜೆಎಂ ನ್ಯಾಯಾಲಯ, ಮೈಸೂರು | 16.8.2005 ಪೂರ್ವಾಹ್ನ | 15.8.2006 | 16.8.2006 |
| 22 | ಎಸ್.ಎಸ್. ಲೋಕೂರ್, ಸಿಜೆಎಂ ನ್ಯಾಯಾಲಯ, ಬೆಳಗಾವಿ | 12.8.2005 ಪೂರ್ವಾಹ್ನ | 1.8.2006 | 12.8.2006 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1340 ಒಳಾಡಳಿತ ಇಲಾಖೆ,

(ಕಾ ಮತ್ತು ಸು, ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ, ನಿಯೋಜನೆ ಮೇಲೆ ಕಾರ್ಯನಿರ್ವಹಣಾಧಿಕಾರಿ, ಯಳಂದೂರು ತಾಲ್ಲೂಕು ಪಂಚಾಯಿತಿ, ಚಾಮರಾಜನಗರ (ಪ್ರಸ್ತುತ ಅಮಾನತ್ತಿನಲ್ಲಿ) ಇವರನ್ನು ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಲೋಕಾಯುಕ್ತ ಪೊಲೀಸರಿಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್ /ಐಎನ್ ವಿ(ಜಿ)/ಎಂ–46/ಸಿಆರ್–4/2007 ದಿನಾಂಕ:30.7.2008.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:30.7.2008ರ ಪತ್ರದಲ್ಲಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ಯಳಂದೂರು ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಯಾಗಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದಾಗ, ದಿನಾಂಕ:28.11.2007ರಂದು ಶ್ರೀ ಶಿವಮೂರ್ತಿ ಬಿನ್ ಲಿಂಗಯ್ಯ, ಮದ್ದೂರು ಗ್ರಾಮ, ಯಳಂದೂರು ತಾಲ್ಲೂಕು ರವರಿಂದ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಸಾಲ ಮಂಜೂರು ಮಾಡಲು ಫಲಾನುಭವಿಗಳಿಂದ ರೂ,. 4,500/– ಲಂಚದ ಹಣವನ್ನು ಒತ್ತಾಯದಿಂದ ಸ್ವೀಕರಿಸುವಾಗ, ಚಾಮರಾಜನಗರ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದು, ಪ್ರಾಥಮಿಕ ತನಿಖೆಯಿಂದ ದೃಡಪಟ್ಟಿರುವ ಕಾರಣ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಅನುಮತಿಯನ್ನು ನೀಡಬೇಕೆಂದು ಕೋರಿದ್ದಾರೆ.

ಲೋಕಾಯುಕ್ತದಿಂದ ಒದಗಿಸಲ್ಪಟ್ಟ ತನಿಖಾ ವರದಿ ಇತ್ಯಾದಿಗಳನ್ನು ಪರಿಶೀಲಿಸಲಾಗಿ, ದಿನಾಂಕ:27.11.2007 ರಂದು ಶ್ರೀ ಬಿ.ವಿ. ರಮೇಶ್ ಅವರು ತಮ್ಮನ್ನು ಭೇಟಿ ಮಾಡಿದ ಪಿರ್ಯಾದುದಾರರಾದ ಶಿವಮೂರ್ತಿ ಬಿನ್ ನಿಂಗಯ್ಯ, ಮದ್ದೂರು ಗ್ರಾಮ ಯಳಂದೂರು ತಾಲ್ಲೂಕು ಅವರೊಡನೆ ಮಹದೇವಸ್ವಾಮಿ. ದೊರೆಸ್ವಾಮಿ ಹಾಗೂ ಶ್ರೀಮತಿ ಜಯಶ್ರೀ ಅವರುಗಳನ್ನು ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ವತಿಯಿಂದ ಸ್ವಯಂ ಉದ್ಯೋಗ ಯೋಜನೆಯಡಿ ಫಲಾನುಭವಿಗಳಾಗಿ ಆಯ್ಕೆ ಮಾಡಲು 10.000 ರೂಪಾಯಿಗಳನ್ನು ಕೊಡಬೇಕೆಂದು ಒತ್ತಾಯಿಸಿದಾಗ ಪಿರ್ಯಾದಿ ಇಷ್ಟು ಹಣವನ್ನು ಕೊಡಲು ಸಾಧ್ಯವಿಲ್ಲ ನಾವೆಲ್ಲಾ ಸೇರಿ 4500–00 ರೂಪಾಯಿಗಳನ್ನು ಕೊಡುತ್ತೇವೆಂದು ಹೇಳಿದಾಗ ಆರೋಪಿತರು ಆಯಿತು ಹಣವನನು ನಾಳೆ ತಂದು ಕೊಡಿ ನಿಮ್ಮ ಕೆಲಸವನ್ನು ಮಾಡಿ ಕಳುಹಿಸುತ್ತೇನೆ. ಎಂದು ಹೇಳಿರುತ್ತಾರೆ. ಪಿರ್ಯಾದಿಯು ಈ ವಿಚಾರವನ್ನು ತನ್ನ ಸಹ ಫಲಾನುಭವಿಗೆ ತಿಳಿಸಿದಾಗ ಅವರೂ ಸಹಾ ಹಣ ಕೊಟ್ಟು ಕೆಲಸ ಮಾಡಿಸಿಕೊಳ್ಳುವುದು ಬೇಡ ಇದು ಸರ್ಕಾರದ ಯೋಜನೆಯಾದ್ದರಿಂದ ಲೋಕಾಯುಕ್ತಕ್ಕೆ ದೂರು ಕೊಡೋಣವೆಂದು ತಿಳಿಸಿದರು. ಅದರಂತೆ ಫಿರ್ಯಾದಿಯು ತನಗೂ ಹಣ ನೀಡಲು ಇಚ್ಚೆ ಇಲ್ಲದೇ ಇರುವುದರಿಂದ ಸದರಿ ಹಣವನ್ನು ಪಿರ್ಯಾದಿಯವರು ಸಧ್ಯಕ್ಕೆ ತಾನೇ ನೀಡುವುದಾಗಿ ನಂತರ ಎಲ್ಲರೂ ಸಮನಾಗಿ ಹಣ ನೀಡಬೇಕೆಂದು ಇತರೆ ಸಹ ಫಲಾನುಭವಿಗಳಿಗೆ ತಿಳಿಸಿ ದಿನಾಂಕ:28.11.2007 ರಂದು ಚಾಮರಾಜನಗರ ಲೋಕಾಯುಕ್ತ ಠಾಣೆಗೆ ಹಾಜರಾಗಿ 4500–00 ರೂಪಾಯಿಗಳೊಂದಿಗೆ ನೀಡಿದ ಲಿಖಿತ ದೂರಿನ ಮೇರೆಗೆ ಠಾಣಾ ಮೊಕದ್ದಮೆ ಸಂಖ್ಯೆ 04/2007 ಕಲಂ 7, 13(1)(ಡಿ) ರೆ.ವಿ 13(2) ಪಿ.ಸಿ. ಆಕ್ಟ್ 1988ರ ರಿತ್ಯಾ ಪ್ರಕರಣ ದಾಖಲು

ಮಾಡಿ ತನಿಖೆ ಕೈಗೊಂಡಿದೆ. ಕೇಸಿನ ಪ್ರಥಮ ವರ್ತಮಾನ ವರದಿಯನ್ನು ಒಂದು ಸೀಲ್ಡ್ ಕವರ್‌ನಲ್ಲಿ ಗೌರವಾನ್ವಿತ ನ್ಯಾಯಾಲಯಕ್ಕೆ ಹಾಗೂ ಪ್ರಥಮ ವರ್ತಮಾನ ವರದಿಯ ನಕಲಗಳನ್ನು ಇಲಾಖೆಯ ಮೇಲಾಧಿಕಾರಿಯವರಿಗೆ ಸಲ್ಲಿಸಿದ್ದಾರೆ.

ಆ ನಂತರ ದಿನಾಂಕ: 28.11.2007ರಂದು ಸಂಜೆ 5.00 ಗಂಟೆಗೆ ಚಾಮರಾಜನಗರ ಪೊಲೀಸ್ ಠಾಣೆಯನ್ನು ಬಿಟ್ಟು ದೊರೆಸ್ವಾಮಾಚಾರ್ ಪಿಡಬ್ಲ್ಯೂ–1 ಮತ್ತು ಎಸ್. ಲಿಂಗರಾಜು ಪಿಡಬ್ಲ್ಯೂ–2 ಅವರೊಗಳೊಡನೆ ಇಲಾಖೆಯ ವಾಹನ ಸಂಖ್ಯೆ ಕೆಎ–01–ಜೆ 3932ರಲ್ಲಿ ಸಂತೇಮರಹಳ್ಳಿ ಮಾರ್ಗವಾಗಿ ಆರೋಪಿ ಇರುವ ಯಳಂದೂರಿನ ಕಛೇರಿಗೆ ಸಂಜೆ 5–20 ಕ್ಕೆ ತಲುಪಿದ್ದಾರೆ. ಫಿರ್ಯಾದಿ ಹಾಗೂ ಪಂಚ–2 ರವರಿಗೆ ಎಂಟ್ರಸ್ಟ್‌ಮೆಂಟ್ ಮಹಜರ್ ಸಮಯದಲ್ಲಿ ನೀಡಿದ್ದ ಸೂಚನೆಯನ್ನು ಮೊತ್ತೊಮ್ಮೆ ನೀಡಿ ಆರೋಪಿತರ ಭೇಟಿ ಬಗ್ಗೆ ಕಳಹಿಸಿ, ಪಂಚ–1 ರವರನ್ನು ತನಿಖಾಧಿಕಾರಿಯ ಜೊತೆ ಇಟ್ಟುಕೊಂಡು ಸಿಬ್ಬಂದಿಯವರನ್ನು ಆಯಕಟ್ಟಿನ ಸ್ಥಳಗಳಿಗೆ ನಿಯೋಜಿಸಲಾಯ್ತು ನಂತರ ಸುಮಾರು 5–35 ಪಿ.ಎಂ. ಸಮಯಕ್ಕೆ ಫಿರ್ಯಾದಿಯವರು ಪಂಚ–2 ಜೊತೆಗೆ ಆರೋಪಿತರ ಕಛೇರಿಯಿಂದ ಹೊರಗಡೆ ಬಂದು ಆರೋಪಿತ ಸರ್ಕಾರಿ ಅಧಿಕಾರಿ ಲಂಚದ ಹಣ ಸ್ವೀಕರಿಸಿಕೊಂಡಿರುವ ಬಗ್ಗೆ ಫಿರ್ಯಾದಿಯವರು ತಮ್ಮ ಬಲಗೈನಿಂದ ಮುಖ ಒರೆಸಿಕೊಳ್ಳುವ ಮೂಲಕ ನಿಗಧಿತ ಸೂಚನೆ ನಿಡಿದರು. ತನಿಖಾಧಿಕಾರಿ ಮತ್ತು ಪಂ–1 ರವರು ಸಿಬ್ಬಂದಿಯವರೊಂದಿಗೆ ಫಿರ್ಯಾದಿಯವರು ಇದ್ದ ಸ್ಥಳಕ್ಕೆ ಹೋಗಿ ಫಿರ್ಯಾದಿಯವರನ್ನು ವಿಚಾರಿಸಲಾಗಿ ಆರೋಪಿತರು ಲಂಚದ ಹಣ ಪಡೆದಿರುವುದಾಗಿ ತಿಳಿಸಿದ್ದು, ನಂತರ ತನಿಖಾಧಿಕಾರಿ ಹಾಗೂ ಇತರರನ್ನು ತಾಲ್ಲೂಕು ಪಂಚಾಯತ್ ಕಛೇರಿಗೆ ಕರೆದುಕೊಂಡು ಹೋಗಿ ಅಲ್ಲಿ ಒಂದು ಕೊಠಡಿಯಲ್ಲಿದ್ದ ಅಧಿಕಾರಿಯೊಬ್ಬರನ್ನು ತೋರಿಸಿ ಇವರೇ ಸಾರ್ ನನ್ನಿಂದ ಲಂಚದ ಹಣವನ್ನು ಒತ್ತಾಯ ಮಾಡಿ ಪಡೆದುಕೊಂಡವರು ಎಂದು ಗುರುತಿಸಿ ತೋರಿಸಿದ್ದು ಸದರಿಯವರಿಗೆ ತನಿಖಾಧಿಕಾರಿಯು ಪರಿಚಯವನ್ನು ತಿಳಿಸಿ ಅವರ ಹೆಸರು ಮತ್ತು ವಿಳಾಸ ಕೇಳಲಾಗಿ ಅವರು ನನ್ನ ಹೆಸರು ಶ್ರೀ ಬಿ.ವಿ/. ರಮೇಶ್ ಬಿನ್ ವೆಂಕಟರಾಮಯ್ಯ, ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ ಎಂದು ತಿಳಿಸಿದರು. ಸದರಿಯವರು ಹೆಸರು ಮತ್ತು ವಿಳಾಸ ಖಚಿತಪಡಿಸಿಕೊಂಡು ಅವರು ವಿರುದ್ಧ ದಾಖಲಾಗಿದ್ದ ಪ್ರಕರಣದ ವಿಚಾರವನ್ನು ತಿಳಿಸಿ, ಸದರಿಯವರನ್ನು 6–00 ಪಿ.ಎಂ.ಗೆ ದಸ್ತಗಿರಿ ಮಾಡಿ, ಈ ಬಗ್ಗೆ ಕಾರ್ಯನಿರ್ವಹಣಾಧಿಕಾರಿ ಕಛೇರಿಯ ಲೆಕ್ಕ ಅಧೀಕ್ಷಕರಾದ ಶ್ರೀ ಕೆ.ಎಲ್. ಶಿವಣ್ಣ ರವರಿಗೆ ಲಿಖಿತವಾಗಿ ಮಾಹಿತಿಯನ್ನು ತನಿಖಾಧಿಕಾರಿಯು ನೀಡಿದರು.

ನಂತರ ಪಿರ್ಯಾದಿಯವರನ್ನು ಆರೋಪಿತರ ಭೇಟಿ ಬಗ್ಗೆ ಬಂದಾಗಿನಿಂದ ನಡೆದ ಘಟನೆಯ ಬಗ್ಗೆ ವಿವರಿಸುವಂತೆ ಕೇಳಿದಾಗ ಸದರಿಯವರು "ನಾನು ಮತ್ತು ಪಂಚ–2 ರವರು ಯಳಂದೂರು ತಾಲ್ಲೂಕು ಪಂಚಾಯತ್ ಕಛೆರಿಯ ಇ.ಓ. ರವರ ಕೊಠಡಿಗೆ ಹೋಗಿ ಆರೋಪಿತರನ್ನು ಭೇಟಿ ಮಾಡಿದಾಗ ಅವರು ಒಬ್ಬರೇ ಕುಳಿತಿದ್ದರು. ನನ್ನನ್ನು ನೋಡಿದ ಕೂಡಲೇ ಆರೋಪಿತರು" ನಾನು ಹೇಳಿದಂತೆ 4500–00 ರೂ. ಹಣ ತಂದಿರುವಿರಾ ಎಂದು ಕೇಳಿದರು, ಆಗ ನಾನು ತಂದಿರುವೆ ಎಂದು ಹೇಳಿದಾಗ, ಅವರು ಕೊಡು ಎಂದು ಹೇಳಿ ತಮ್ಮ ಬಲಗೈ ಚಾಚಿದಾಗ ನಾನು ಫಿನಾಪ್ತಲಿನ್ ಲೇಪಿತ 4500–00 ರೂ.ಗಳನ್ನು ತೆಗೆದು ಆರೋಪಿತರ ಬಲಕೈಗೆ ನಿಡಿದೆ. ಆಗ ಅವರು ಹಣವನ್ನು ಪಡೆದುಕೊಂಡು ಎಣಿಸಿ ತಮ್ಮ ಟೇಬಲ್ ಬಲಭಾಗದ ಡ್ರಾನಲ್ಲಿ ಇಟ್ಟುಕೊಂಡರು, ನಂತರ ನಾನು,. ಸಾರ್ ನಮ್ಮಗಳ ಕೆಲಸ ಯಾವಾಗ ಮಾಡಿಕೊಡುತ್ತೀರಾ ಎಂದು ಕೇಳಿದಾಗ, ಆಯಿತು ಮಾಡಿಕೊಡುತ್ತೇನೆ, ನೀನು ಹೋಗು" ಎಂದು ಹೇಳಿದರು. ನಂತರ ನಾನು ಮತ್ತು ಪಂಚ–2 ರವರು ಕಛೇರಿಯಿಂದ ಹೊರಗೆ ಬಂದು, ಎಂಟ್ರಸ್ಟ್‌ಮೆಂಟ್ ಮಹಜರ್ ಸಮಯದಲ್ಲಿ ಹೇಳಿದಂತೆ ನಾನು ಸಂಜ್ಞೆಯನ್ನು ನೀಡಿರುತ್ತೇನೆ ಎಂದು ತಿಳಿಸಿದರು. ನಂತರ ಈ ಬಗ್ಗೆ ಪಂಚ–2 ರವರನ್ನು ವಿಚಾರ ಮಾಡಿದಾಗ ಅವರೂ ಸಹ ಫಿರ್ಯಾದಿಯವರು ನುಡಿದಿದ್ದನ್ನೇ ಅನುಸರಿಸಿ ನುಡಿಸಿರುತ್ತಾರೆ.

ತನಿಖಾಧಿಕಾರಿಯು ಫಿರ್ಯಾದಿಯವರಿಗೆ ಎಂಟ್ರಾಸ್ಟ್‌ಮೆಂಟ್ ಮಹಜರ್ ಸಮಯದಲ್ಲಿ ನೀಡಿದ್ದ ವಾಯ್ಸ್ ರೆಕಾರ್ಡ್‌ರನ್ನು ಅವರಿಗೆ ನೀಡಿದರು. ಸದರಿ ವಾಯ್ಸ್ ರೆಕಾರ್ಡ್‌ರನ್ನು ಪಂಚರ ಸಮಕ್ಷಮ ಕ್ಯಾಸೆಟ್‌ನ ಬಿ ಬದಿಯಲ್ಲಿ ಹಾಕಿ ಕೇಳಲಾಗಿರುತ್ತದೆ. ಈ ಕ್ಯಾಸೆಟ್ ಅನ್ನು ಅಮಾನತ್ತುಪಡಿಸುವ ಸಲುವಾಗಿ ಒಂದು ಕವರ್ ಮೇಲೆ ಪ್ರಕರಣದ ವಿವರ ಹಾಗೂ ಕ್ಯಾಸೆಟ್ ಬಗ್ಗೆ ನಮೂದಿಸಿ ಪಂಚರುಗಳ ಸಹಿ ಪಡೆದು ತನಿಖಾಧಿಕಾರಿಯು ಸಹಿ ಮಾಡಿ ಕ್ಯಾಸೆಟ್ ಅನ್ನು ಸದರಿ ಕವರ್ ಒಳಗೆ ಹಾಕಿ ಕವರ್ ಅನ್ನು ಅಂಟಿಸಿ 'ಎಂ' ಎಂಬ ಆಂಗ್ಲ ಅಕ್ಷರದ ಮೆಟಲ್ ಸೀಲ್‌ನಿಂದ ಮಾಡಿ ಇದಕ್ಕೆ ಆರ್ಟಿಕಲ್–3 ಎಂದು ನಮೂದಿಸಲಾಯ್ತು.

ನಂತರ ಆರೋಪಿತರು ಲಂಚದ ಹಣ ಪಡೆದಿರುವ ಬಗ್ಗೆ ಖಚಿತಪಡಿಸಿಕೊಳ್ಳಲು ಸಿಬ್ಬಂದಿಗಳ ಸಹಾಯದಿಂದ ಒಂದು ಗಾಜಿನ ಲೋಟದಲ್ಲಿ ಸೋಡಿಯಂ ಕಾರ್ಬೋನೇಟ್ ದ್ರಾವಣವನ್ನು ತಯಾರಿಸಿ, ಸದರಿ ದ್ರಾವಣದಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯವರಾದ ಶ್ರೀ ಬಿ.ವಿ. ರಮೇಶ್ ರವರ ಬಲಗೈಬೆರಳುಗಳನ್ನು ಅದ್ದಿಸಿ ತೊಳೆಸಿದ್ದು, ಬಣ್ಣರಹಿತವಾಗಿದ್ದ ದ್ರಾವಣವು ಗುಲಾಬಿ ಬಣ್ಣಕ್ಕೆ ತಿರುಗಿರುತ್ತದೆ. ಸದರಿ ದ್ರಾವಣವನ್ನು ಒಂದು ಗಾಜಿನ ಬಾಟಲ್‌ಗೆ ಹಾಕಿ ಮುಚ್ಚಳ ಮುಚ್ಚಿ ಬಟ್ಟೆಯಿಂದ ಕಟ್ಟಿ

ಒಂದು ಚೀಟಿಯಲ್ಲಿ ಕೇಸಿನ ವಿವರ ಬರೆದು ಪಂಚರುಗಳ ಸಹಿ ಮಾಡಿಸಿ, ತನಿಖಾಧಿಕಾರಿಯ ಸಹಿ ಮಾಡಿ ಅದನ್ನು ಬಾಟಲ್ ಮೇಲೆ ಅಂಟಿಸಿ "ಎಂ" ಎಂಬ ಆಂಗ್ಲ ಅಕ್ಷರದಿಂದ ಸೀಲು ಮಾಡಿ ಆರ್ಟಿಕಲ್–4 ಎಂದು ನಮೂದು ಮಾಡಲಾಯ್ತು.

ನಂತರ ಆರೋಪಿತರು ಪಿರ್ಯಾದಿಯವರಿಂದ ಪಡೆದ 4500–00 ರೂ.ಗಳನ್ನು ಹಾಜರುಪಡಿಸಬೇಕೆಂದು ಕೇಳಿದಾಗ ಆರೋಪಿತರು ತಾವು ಕುಳಿತಿದ್ದ ಟೇಬಲ್‌ನ ಬಲಭಾಗದ ಡ್ರಾಯರ್ ಎಳೆದು ಅವರಲ್ಲಿದ್ದ ಫಿನಾಫ್ತಲಿನ್ ಲೇಪಿತ ರೂ. 4500–00 ಗಳು ಇಟ್ಟಿರುವುದಾಗಿ ತೋರಿಸಿದರು. ಆಗ ತನಿಖಾಧಿಕಾರಿಯು ಎಂಟ್ರಸ್ಟ ಮೆಂಟ್ ಮಹಜರ್ ಸಮಯದಲ್ಲಿ ಬರೆದುಕೊಂಡ ನೋಟಿನ ವಿವರದ ಹಾಳೆಯನ್ನು ತೆಗೆದು ಡ್ರಾಯರ್‌ನಲ್ಲಿರುವ ಹಣದೊಂದಿಗೆ ತಾಳೆ ಮಾಡುವಂತೆ ಪಂಚ–1 ರವರಿಗೆ ಸೂಚಿಸಿದರು ಪಂಚ–1 ರವರು ತನ್ನ ಬಳಿ ಇದ್ದ ನೋಟಿನ ವಿವರದ ಹಾಳೆಯನ್ನು ತೆಗೆದು ಫಿನಾಫ್ತಲಿನ್ ಲೇಪಿತ ಹಣ 4500–00ರೂ.ಗಳೊಂದಿಗೆ ಪರಿಶೀಲಿಸಿ, ತಾಳೆಯಾಗಿರುತ್ತದೆ ಎಂದು ತಿಳಿಸಿದರು. ನಂತರ ಒಂದು ಕವರ್‌ನ ಮೇಲೆ ಪ್ರಕರಣದ ವಿವರ ನೋಟಿನ ಮೌಲ್ಯ ಹಾಗೂ ನಂಬರ್ ನಮೂದಿಸಿ ಅದಕ್ಕೆ ಪಂಚರುಗಳ ಸಹಿ ಪಡೆದು ತನಿಖಾಧಿಕಾರಿಯು ಸಹಿ ಮಾಡಿ ಆ ಕವರ್‌ನ ಒಳಗೆ ಫಿನಾಫ್ತಲೀಸ್ ಲೇಪಿತ ನೋಟುಗಳನ್ನು ಹಾಕಿ ಕವರ್ ಅಂಟಿಸಿ "ಎಂ" ಎಂಬ ಆಂಗ್ಲ ಅಕ್ಷರದ ಮೆಟಲ್ ಸೀಲ್‌ನಿಂದ ಸೀಲು ಮಾಡಿ ಆರ್ಟಿಕಲ್ –6 ಎಂದು ನಮೂದು ಮಾಡಲಾಯ್ತು ಪಂಚ–1 ರವರ ಬಳಿ ಇದ್ದ ನೋಟಿನ ವಿವರದ ಹಾಳೆಯನ್ನು ಪಡೆದುಕೊಂಡು ಕಡತದಲ್ಲಿರಿಸಕೊಳ್ಳಲಾಯ್ತು.

ನಂತರ ಆರೋಪಿತರು ಪಿರ್ಯಾದಿಯಿಂದ ಲಂಚದ ಹಣ ಪಡೆದು ಇಟ್ಟುಕೊಂಡಿದ್ದ ಟೇಬಲ್‌ನ ಬಲಭಾಗದ ಡ್ರಾಯರ್‌ನ ಸ್ಥಳವನ್ನು ಸಿಬ್ಬಂದಿಗಳ ಸಹಾಯದಿಂದ ಸ್ವಲ್ಪ ಹತ್ತಿಯನ್ನು ತೆಗೆದುಕೊಂಡು ಒರೆಸಿ, ಒಂದು ಕವರ್ ಮೇಲೆ ಕೇಸಿನ ವಿವರ ನಮೂದಿಸಿ ಅದಕ್ಕೆ ಪಂಚರುಗಳ ಸಹಿ ಪಡೆದು, ತನಿಖಾಧಿಕಾರಿಯು ಸಹಿ ಮಾಡಿ ಆ ಕವರ್‌ನ ಒಳಗೆ ಸದರಿ ಹತ್ತಿಯನ್ನು ಹಾಕಿ ಕವರ್ ಅಂಟಿಸಿ "ಎಂ" ಎಂಬ ಆಂಗ್ಲ ಅಕ್ಷರದಿಂದ ಸೀಲು ಮಾಡಿ ಆರ್ಟಿಕಲ್–7 ಎಂದು ನಮೂದು ಮಾಡಲಾಯ್ತು.

ನಂತರ ಪ್ರಕರಣದಲ್ಲಿ ದ್ರಾವಣ ತಯಾರಿಸಲು ಉಪಯೋಗಿಸಿದ್ದ ಸೊಡಿಯಂ ಕಾರ್ಬೋನೇಟ್ ಪೌಡರ್ ಅನ್ನು ಸ್ಯಾಂಪಲ್ ಸಂಬಂಧ ತೆಗೆದುಕೊಂಡು ಒಂದು ಪಟ್ಟಣ ಕಟ್ಟಿ ಒಂದು ಕವರ್‌ನ ಮೇಲೆ ಕೇಸಿನ ವಿವರ ಹಾಗೂ ಸೋಡಿಯಂ ಕಾರ್ಬೋನೇಟ್ ಪೌಡರ್ ವಿವರ ನಮೂದಿಸಿ ಪಂಚರುಗಳ ಸಹಿ ಪಡೆದು ಪಿ.ಐ. ರವರು ಸಹಿ ಮಾಡಿ ಸದರಿ ಕವರ್ ಒಳಗೆ ಸೋಡಿಯಂ ಕಾರ್ಬೋನೇಟ್ ಪೌಡರ್ ಇರುವ ಪೊಟ್ಟಣವನ್ನು ಹಾಕಿ ಕವರ್ ಅಂಟಿಸಿ 'ಎಂ' ಎಂಬ ಆಂಗ್ಲ ಅಕ್ಷರದ ಮೆಟಲ್ ಸೀಲ್‌ನಿಂದ ಸೀಲ್ ಮಾಡಿ ಆರ್ಟಿಕಲ್–8 ಎಂದು ನಮೂದು ಮಾಡಲಾಯ್ತು.

ನಂತರ ಪ್ರಕರಣದಲ್ಲಿ ದ್ರಾವಣ ತಯಾರಿಸಲು ಉಪಯೋಗಿಸಿದ್ದ ಡಿಸ್ಟಿಲ್ಡ್ ವಾಟರ್ ವಿವರ ನಮೂದಿಸಿ ಪಂಚರುಗಳ ಸಹಿ ಪಡೆದು, ನಾನು ಸಹಿ ಮಾಡಿ ಕವರ್ ಅಮಟಿಸಿ 'ಎಂ' ಎಂಬ ಆಂಗ್ಲ ಅಕ್ಷರದ ಸೀಲ್ ಮಾಡಿ ಆರ್ಟಿಕಲ್–9 ಎಂದು ನಮೂದು ಮಾಡಲಾಯ್ತು ಮೇಲ್ಕಂಡ ಕ್ರಮ ಸಂಖ್ಯೆ 1 ರಿಂದ 9 ರವರೆಗಿನ ಆರ್ಟಿಕಲ್‌ಗಳನ್ನು ಕೇಸಿನ ತನಿಖಾ ಸಂಬಂಧ ಅಮಾನತ್ತು ಪಡಿಸಿಕೊಳ್ಳಲಾಯ್ತು.

ನಂತರ ಆರೋಪಿತರಿಗೆ ಟ್ರಾಪ್ ಸಂಬಂಧ ತಮ್ಮ ಸಮಾಜಾಯಿಷಿಯನ್ನು ನೀಡುವಂತೆ ಕೇಳಿದಾಗ ಆರೋಪಿತರು ತಮ್ಮ ಸಮಜಾಯಿಷಿಯಲ್ಲಿ "ಪಿರ್ಯಾದಿ ಮತ್ತು ಮೊತ್ತಬ್ಬ ವ್ಯಕ್ತಿ ಬಂದಾಗ ನಾನು ಮೂತ್ರಕ್ಕೆ ಎದ್ದು ಹೋದಾಗ ಡ್ರಾಯರ್‌ಗೆ ಹಣ ಹಾಕಿರುತ್ತಾರೆ" ಎಂದು ಇತ್ಯಾದಿಯಾಗಿ ತಿಳಿಸಿರುತ್ತಾರೆ. ಈ ಸಮಜಾಯಿಷಿಯನ್ನು ಪಿರ್ಯಾದಿ ಮತ್ತು ಪಂಚ–2 ರವರು ಒಪ್ಪಿರುವುದಿಲ್ಲ. ಈ ಸಮಜಾಯಿಷಿಗೆ ಪಂಚರ ಸಹಿ ಪಡೆದು ತನಿಖಾಧಿಕಾರಿಯು ಸಹಿ ಮಾಡಿದ್ದಾರೆ.

ನಂತರ ಆರೋಪಿತರಿಗೆ ಪಿರ್ಯಾದಿ ಹಾಗೂ ದೊರೆಸ್ವಾಮಿ ಜಯಶ್ರೀ, ಮಹದೇವಸ್ವಾಮಿ ಇವರಿಗೆ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವಯಂ ಉದ್ಯೋಗ ಯೋಜನೆಯಡಿ ಸಾಲ ಸೌಲಭ್ಯಕ್ಕಾಗಿ ಅರ್ಜಿ ಸಲ್ಲಿಸಿದ್ದು ಈ ಬಗ್ಗೆ ಪರಿಶೀಲನೆಗಾಗಿ ಹಾಗೂ ಫಲಾನುಭವಿಗಳ ಆಯ್ಕೆಗಾಗಿ ಯಳಂದೂರು ತಾಲ್ಲೂಕು ಪಂಚಾಯಿತಿ ಕಛೇರಿಗೆ ಬಂದಿದ್ದು ಈ ಸಂಬಂಧ ದಾಖಲೆಗಳನ್ನು ಹಾಜರುಪಡಿಸುವಂತೆ ತಿಳಿಸಿದಾಗ ದಾಖಲೆಗಳು ತಮ್ಮ ಬಳಿ ಇಲ್ಲ, ಫಲಾನುಭವಿಗಳ ಆಯ್ಕೆ ಮಾಡುವ ಸಮಿತಿಗೆ ನಾನು ಅಧ್ಯಕ್ಷನಾಗಿರುತ್ತೇನೆ. ಚಾಮರಾಜನಗರ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಅಭಿವೃದ್ಧಿ ಅಧಿಕಾರಿಯಾದ ಶ್ರೀ ಸುಬ್ಬಪ್ಪ ಇವರ ಬಳಿ ಇರುತ್ತದೆ ಎಂದು ತಿಳಿಸಿರುತ್ತಾರೆ. ನಂತರ ತಾಲ್ಲೂಕು ಪಂಚಾಯಿತಿ ಕಛೇರಿಯ ಪ್ರಭಾರ ವ್ಯವಸ್ಥಾಪಕರಾದ ಶ್ರೀ ಎಂ.ಎಸ್. ಶಂಕರ್ ಹಾಗೂ ಈ ಹಿಂದೆ ಪ್ರಭಾರ ವ್ಯವಸ್ಥಾಪಕರಾಗಿದ್ದ ಶ್ರೀಮತಿ ಸುಧಾ ರತ್ನಕುಮಾರಿ ಅವರನ್ನು ವಿಚಾರಿಸಿದಾಗ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವಯಂ ಉದ್ಯೋಗ ಯೋಜನೆಯಡಿ ಸಾಲ ಸೌಲಭ್ಯಕ್ಕಾಗಿ ಅರ್ಜಿಯು ನಮ್ಮ ಕಛೇರಿಗೆ ನೇರವಾಗಿ ಬಂದಿರುವುದಿಲ್ಲ ಅದನ್ನು ಶ್ರೀ ಸುಬ್ಬಪ್ಪ ರವರೇ ನಿರ್ವಹಿಸುತ್ತಾರೆ ಎಂದು ತಿಳಿಸಿರುತ್ತಾರೆ. ನಂತರ ಆರೋಪಿತರು ದಿನಾಂಕ:28.11.2007 ರಂದು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸಿರುವ ಬಗ್ಗೆ ಹಾಜರಾತಿಗೆ ಸಹಿ ಹಾಕಿರುವ ಬಗ್ಗೆ ಪರಿಶೀಲಿಸಲು ಹಾಜರಾತಿಯನ್ನು ವಹಿಯನ್ನು ಪಡೆದು ಪರಿಶೀಲಿಸಿದಾಗ ಆರೋಪಿತರು ಕರ್ತವ್ಯಕ್ಕೆ ಹಾಜರಾಗಿರುವ ಬಗ್ಗೆ ಸಹಿ ಮಾಡಿರುತ್ತಾರೆ. ಹಾಜರಾತಿ ವಹಿಯನ್ನು ಅಮಾನತ್ತುಪಡಿಸಲಾಯ್ತು.

ನಂತರ ಆರೋಪಿತರಿಂದ ಅವರ ಸೇವಾ ವಿವರವನ್ನು ಪಡೆದುಕೊಳ್ಳಲಾಯ್ತು. ಆರ್ಟಿಕಲ್ಸ್‌ಗಳನ್ನು ಮೊಹರು ಮಾಡಲು ಉಪಯೋಗಿಸಲಾದ ಆಂಗ್ಲ ಅಕ್ಷರದ ಮೆಟಲ್ ಸೀಲ್ 'ಎಂ' ನ್ನು ಸ್ಯಾಂಪಲ್ ಸಂಬಂಧ ಕೆಲವು ಹಾಳೆಗಳ ಮೇಲೆ ಪಡೆದುಕೊಂಡು ಅದಕ್ಕೆ ಪಂಚರುಗಳ ಸಹಿ ಪಡೆದು ತನಿಖಾಧಿಕಾರಿಯು ಸಹಿ ಮಾಡಿ ನಂತರ 'ಎಂ' ಎಂಬ ಆಂಗ್ಲ ಅಕ್ಷರದ ಮೆಟಲ್ ಸೀಲ್ ಅನ್ನು ಪಂಚ–1 ರವರಿಗೆ ನೀಡಿ ಅದನ್ನು ಗೌರವಾನ್ವಿತ ನ್ಯಾಯಾಲಯವಾಗಲೀ, ವಿಚಾರಣಾಧಿಕಾರಿಯವರಾಗಲಿ ಕೇಳಿದಾಗ ಹಾಜರುಪಡಿಸುವಂತೆ ತನಿಖಾಧಿಕಾರಿಯು ಸೂಚಿಸಿದರು. ಪಂಚ–1 ರವರು ಮೆಟಲ್ ಸೀಲ್ ಅನ್ನು ಪಡೆದುಕೊಂಡ ಬಗ್ಗೆ ಸ್ವೀಕೃತಿಯನ್ನು ನೀಡಿರುತ್ತಾರೆ. ಈ ನಡಾವಳಿಗಳ ಕಾಲದಲ್ಲಿ ಫೋಟೋ ತೆಗೆಸಲಾಗಿದೆ. ಮಹಜರ್ ಕಾಲದಲ್ಲಿ ಕಚ್ಚಾನಕ್ಷೆ ಬರೆದು ಅದಕ್ಕೆ ಪಂಚರುಗಳ ಸಹಿ ಪಡೆದು ತನಿಖಾಧಿಕಾರಿಯ ಸಹಿ ಮಾಡಲಾಗಿದೆ.

ಈ ನಡಾವಳಿಯ ಸಂಬಂಧ ಆರೋಪಿತ ಅಧಿಕಾರಿಯವರ ಕಛೇರಿಯಲ್ಲಿ ದಿನಾಂಕ:29.11.2007 ರಂದು ರಾತ್ರಿ 6.15 ಗಂಟರಯಿಂದ 7.45 ಗಂಟೆಯವರೆಗೆ ಅಮಾನತ್ತು ಮಹಜರ್ ಕ್ರಮ ಜರುಗಿಸಲಾಯ್ತು ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಆರ್ಟಿಕಲ್ಸ್ ನಂ.1 ರಿಂದ 9 ರವರೆಗಿನವುಗಳನ್ನು ಠಾಣಾ ಮಾಲು ಪಟ್ಟಿ 04/07 ರಲ್ಲಿ ನಮೂದು ಮಾಡಲಾಯಿತು.

ನಂತರ ಆರೋಪಿತರನ್ನು ಸಿಬ್ಬಂದಿಯವರ ಬೆಂಗಾವಲಿನಲ್ಲಿ ಕರೆದುಕೊಂಡು ಯಳಂದೂರಿನಿಂದ ಹೊರಟು ಸಂತೇಮರಳ್ಳಿ ಮಾರ್ಗವಾಗಿ ಚಾಮರಾಜನಗರಕ್ಕೆ ಬಂದು ರಿಮ್ಯಾಂಡ್ ಅರ್ಜಿಯೊಂದಿಗೆ ದಿನಾಂಕ:28.11.2007ರಿಂದ 15 ದಿನಗಳವರೆಗೆ ನ್ಯಾಯಾಂಗ ಬಂಧನದಲ್ಲಿಡಬೇಕಾಗಿ ಕಛೇರಿ ಚಾಮರಾಜನಗರ ಪ್ರಧಾನ ಜಿಲ್ಲಾ ಮತ್ತು ಸತ್ರ ವಿಶೇಷ ನ್ಯಾಯಾಲಯದ ನ್ಯಾಯಾಧೀಶರ ಮನೆಗೆ ಹಾಜರುಪಡಿಸಲಾಗಿದೆ. ನ್ಯಾಯಾಲಯವು ಆರೋಪಿತರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತದೆ.

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಅವರ ಪತ್ರದೊಡನೆ ಸಲ್ಲಿಸಿದ ತನಿಖಾ ವರದಿ, ಎಫ್.ಐ.ಆರ್. ಟ್ರ್ಯಾಪ್ ಪೂರ್ವದ ಮಹಜರು, ಟ್ರ್ಯಾಪ್ ನಡೆವಳಿ ರಾಸಾಯನಿಕ ಪರೀಕ್ಷಾ ವರದಿ, ವಶಪಡಿಸಿಕೊಂಡ ದಾಖಲೆಗಳ ಪ್ರತಿ ಕೃತ್ಯ ನಡೆದ ಸ್ಥಳದ ಸಾಕ್ಷಿಗಳ, ಹೇಳಿಕೆ ಇನ್ನಿತರೆ ದಾಖಲೆಗಳನ್ನು ಪರಿಶೀಲಿಸಿದ ಸರ್ಕಾರವು ಕೃತ್ಯ ನಡೆದಿರುವುದನ್ನು ಹಾಗೂ ಆರೋಪಿಯು ಭಾಗಿಯಾಗಿರುವುದನ್ನು ಖಚಿತಪಡಿಸಿಕೊಂಡ ನಂತರ ಪ್ರಸ್ತಾವನೆಗೆ ಸಮ್ಮತಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸೇಇವಿ 2008 ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್ 2008**

ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಯಳಂದೂರು ಚಾಮರಾಜನಗರ ಜಿಲ್ಲೆ, ಈ ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಅವರನ್ನು ಅದೇ ಕಾಯಿದೆ ಕಲಂ 7, 13(1)(ಡಿ) ರೊಡನೆ ಓದಿಕೊಂಡಂತೆ ಕಲಂ 13(2) ರನ್ವಯ ಮೇಲೆ ಹೇಳಿದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿ ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು 1977ರ ನಿಯಮ 19ರನ್ವಯ ಸರ್ಕಾರದ ಪರವಾಗಿ ಹೊರಡಿಸಲಾಗುವ ಆದೇಶಕ್ಕೆ ಸಹಿ ಮಾಡಲು ಈ ಕೆಳಕಂಡ ಪ್ರಾಧಿಕಾರಿಯು ಅಧಿಕಾರ ಹೊಂದಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1384

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವೆಂಕಟೇಶ್, ಸಿ.ಪಿ.ಸಿ–770, ಕೌಲ್‌ಬಜಾರ್ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಹಾಲಿ ಎ.ಡಿ.ಎಸ್ (ಸಿ.ಓ.ಡಿ) ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ

**ಓದಲಾಗಿದೆ:**
1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಇವರ ಆದೇಶ ಸಂಖ್ಯೆ:05/ಇವಿ/2006 ಜಿ.ಅ.ಸಂ. 456/2006–07 ದಿ:20.1.2007.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:45/ಅಪೀಲು/ಸಿಬ್ಬಂದಿ–2/2006–07 ಓಬಿ:103/2007–08 ದಿನಾಂಕ:21.7.2007.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28.8.2007

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2) 100:2007–08 ದಿನಾಂಕ:25.1.2008.

**ಪ್ರಸ್ತಾವನೆ:**

ಶ್ರೀ ವೆಂಕಟೇಶ್, ಸಿ.ಪಿ.ಸಿ.–770 ಕೌಲ್‌ಬಜಾರ್ ಪೋಲೀಸ್ ಠಾಣೆ ಬಳ್ಳಾರಿ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ವೆಂಕಟೇಶ್, ಸಿ.ಪಿ.ಸಿ– 770, ಕೌಲ್‌ಬಜಾರ್ ಪೋಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಆದ ನೀವು ಕೌಲ್‌ಬಜಾರ್ ಪೋಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:18.3.2006 ರಂದು ಮಧ್ಯಾಹ್ನ 2.00 ಗಂಟೆಯ ಸಮಯಯದಲ್ಲಿ ಬಳ್ಳಾರಿಯ ದೇವಿನಗರ ರಸ್ತೆಯಲ್ಲಿರುವ ಕೆ.ವಿ ಫ್ರೆಂಡ್ಸ್ ಮತ್ತು ರಿಕ್ರಿಯೇಷನ್ ಕ್ಲಬ್ ಮೇಲೆ, ಶ್ರೀ ಎಲ್.ವೈ. ಶಿರಕೋಳ್, ಪಿ.ಐ., ಡಿ.ಸಿ.ಐ.ಬಿ. ಬಳ್ಳಾರಿ ಹಾಗೂ ಸಿಬ್ಬಂದಿಯೊಂದಿಗೆ ಪಂಚರ ಸಮಕ್ಷಮ ಧಾಳಿ ನಡೆಸಿದ್ದು, ಕ್ಲಬ್‌ನಲ್ಲಿ ನಸೀಬಿನ ಜೂಜಾಟ ಆಡುತ್ತಿದ್ದ 9 ಜನರನ್ನು ಬಂಧಿಸಿದ್ದು, ಅದರಲ್ಲಿ ನೀವು ಸಹಾ ಭಾಗಿಯಾಗಿದ್ದು, ಈ ಬಗ್ಗೆ ಕೌಲ್ ಬಜಾರ್ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ. 40/2006 ಕಲಂ 79, 80 ಕೆ.ಪಿ. ಕಾಯ್ದೆ ಅಡಿಯಲ್ಲಿ ಪ್ರಕರಣ ದಾಖಲಾಗಿದ್ದು, ಈ ವಿಷಯ ಕುರಿತು ನಿಮ್ಮನ್ನು ಅಮಾನತ್ತಿನಲ್ಲಿ ಇರಿಸಿದ್ದು ಇರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:20.1.2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯುವ ಹಾಗೂ ಅಮಾನತ್ತಿನ ಅವಧಿ ದಿ:25.3.2006 ರಿಂದ 26.4.2006 ರವರೆಗಿನ ಅವಧಿಯನ್ನು ಈಗಾಗಲೇ ನೀಡಿರುವ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪುರ್ವವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:21.7.2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಬಹುದಾದಂತಹ ಕಾರಣಗಳಾಗಲಿ, ಸಮರ್ಥನೆಯಾಗಲಿ ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 60 ಪೊಸಿಅ 2008, ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವೆಂಕಟೇಶ್, ಸಿ.ಪಿ.ಸಿ–770 ಕೌಲ್‌ಬಜಾರ್ ಪೋಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1441

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ,(ಪೊಲೀಸ್ ಸೇವೆಗಳು)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆಯ ವ್ಯಾಪ್ತಿಯ ಹಾವೇರಿ ಮತ್ತು ಸವಣೂರು ತಾಲ್ಲೂಕುಗಳ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರ ಪತ್ರಸಂಖ್ಯೆ:ಸಿಬಿಎನ್/ಹೈಆ್ಯಸೆ/ಕ.ಸಂ. 7/ಶಾಸಮ/ಗ್ರಾರಮೇ/ಹಾವೇರಿ ವಿಭಾಗ/08-09/05171, ದಿನಾಂಕ:21.8.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರು ಹಾವೇರಿ ಜಿಲ್ಲೆಯ ವ್ಯಾಪ್ತಿಯ ಹಾವೇರಿ ಮತ್ತು ಸವಣೂರು ತಾಲ್ಲೂಕುಗಳ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಾರ್ವಜನಿಕ ಹಿತಾದೃಷ್ಟಿಯಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿದೆ ಎಂದು ವರದಿ ಮಾಡಿರುತ್ತಾರೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| | **ಹಾವೇರಿ ತಾಲ್ಲೂಕು** | |
| 1 | ಹಾವೇರಿ–ದೇವಗಿರಿ ರಸ್ತೆ | 7.00 |
| 2 | ದೇವಗಿರಿ–ಮೆಳ್ಳಾಗಟ್ಟಿ ರಸ್ತೆ (ತಾಲ್ಲೂಕು ಹದ್ದಿನವರೆಗೆ) | 3.40 |
| 3 | ಕನಕಾಪುರ–ಬನ್ನಿಹಳ್ಳಿ ರಸ್ತೆ ಮಾರ್ಗ ಭೂ ಕೋಡಿಹಳ್ಳಿ ಕಲ್ಲಾಪುರ | 5.60 |
| 4 | ಬಿ.ಪಿ. ರಸ್ತೆಯಿಂದ ನಾಗನೂರಿಗೆ ಕೂಡುವ ರಸ್ತೆ | 2.80 |
| 5 | ನಾಗನೂರ–ಕೂಡಲ ರಸ್ತೆ (ತಾಲ್ಲೂಕು ಹದ್ದಿನವರೆಗೆ) | 2.50 |
| 6 | ಕಬ್ಬೂರ–ಹಿರೇಲಿಂಗದಹಳ್ಳಿ ರಸ್ತೆ | 4.30 |
| 7 | ಹಿರೇಲಿಂಗದ ಹಳ್ಳಿ–ಕಲ್ಲಾಪುರ ರಸ್ತೆ | 3.00 |
| 8 | ಕಲ್ಲಾಪುರ–ಕುರುಬಗೊಂಡ ರಸ್ತೆ | 1.50 |
| 9 | ಕುರುಬಗೊಂಡ–ಮಲ್ಲೂರ ರಸ್ತೆ | 2.50 |
| 10 | ಹೊಂಬರಡಿ–ಕುರುಬಗೊಂಡ ರಸ್ತೆ | 5.00 |
| 11 | ಹಾವೇರಿ–ಕೆರಿಮತ್ತಿನಹಳ್ಳಿ ರಸ್ತೆ | 6.00 |
| 12 | ಕೆರಿಮತ್ತಿನಹಳ್ಳಿ–ಹಿರೇಲಿಂಗದಹಳ್ಳಿ ರಸ್ತೆ | 3.50 |
| 13 | ಹೊಸಳ್ಳಿ–ಬೆಂಚಿಹಳ್ಳಿ ರಸ್ತೆ ಮಾರ್ಗ ದೇವಿಹೊಸೂರ | 7.00 |
| 14 | ಬ್ಯಾಡಗಿ–ತಿಳವಳ್ಳಿ ರಸ್ತೆಯಿಂದ ಸೂಡಂಬಿ–ಕಬ್ಬೂರ ರಸ್ತೆಗೆ ಕೂಡು ರಸ್ತೆ | 0.35 |
| | ಒಟ್ಟು | 54.45 |
| | **ಸವಣೂರು ತಾಲ್ಲೂಕು** | |
| 1 | ಮಣ್ಣೂರು–ಚಿಕ್ಕನೆಲ್ಲೂರು ರಸ್ತೆ | 4.00 |
| 2 | ಹುರಳಿಕುಪ್ಪಿ–ಕುರುಬರಮಲ್ಲೂರು ರಸ್ತೆ (ಸವಣೂರು–ಹರವಿ ರಸ್ತೆಗೆ ಕೂಡುವುದು) | 4.00 |
| 3 | ಹತ್ತಿ ಮತ್ತೂರದಿಂದ ಹಳ್ಳಿಹಳ್ಳಿ ರೈಲ್ವೆ ಗೇಟ್‌ವರೆಗೆ ರಸ್ತೆ | 4.00 |
| 4 | ಚಿಲ್ಲೂರದಿಂದ ಸವಣೂರು ರಸ್ತೆ | 4.00 |
| 5 | ಹಿರೇಮುಗದೂರ–ಕಡಕೋಳ ರಸ್ತೆ ಮಾರ್ಗ ಕೃಷ್ಣಾಪುರ–ಕಮಲಬಂದಗಿ–ತಿಮ್ಮಾಪುರ–ಬಸವನಕೊಪ್ಪ–ತಾಲ್ಲೂಕು ಹದ್ದಿನವರೆಗೆ | 21.00 |
| 6 | ಮಂತ್ರೋಡಿಯಿಂದ ಜೇಕಿನಕಟ್ಟಿ ರಸ್ತೆ ಹಿರೇಮಲ್ಲೂರು ಪ್ಲಾಟ್‌ವರೆಗೆ | 3.50 |
| 7 | ಕುರುಬರಮಲ್ಲೂರ–ಮನ್ನಂಗಿ ರಸ್ತೆ | 4.00 |
| 8 | ಸಿದ್ದಾಪುರದಿಂದ ಕಲಿವಾಳ ರಸ್ತೆ | 5.00 |
| 9 | ಕಡಕೋಳ–ಹೆಸರೂರ ರಸ್ತೆ | 5.20 |
| 10 | ಕಡಕೋಳ–ಹಿರೆಮಳ್ಳಿಹಳ್ಳಿ ರಸ್ತೆ | 6.00 |

| | | |
|---|---|---|
| 11 | ಹತ್ತಿಮತ್ತೂರ–ಮಂಟಗಣಿ ರಸ್ತೆ | 6.00 |
| 12 | ಜಲ್ಲಾಪುರ–ಶಿರಬಡಗಿ ರಸ್ತೆ | 3.50 |
| 13 | ಸವಣೂರು–ಶಿಗ್ಗಾಂವ ರಸ್ತೆಯಿಂದ ಕಾರವಾರ–ಇಳಕಲ್ ರಸ್ತೆ ಮಾರ್ಗ ಹೊಸನೀರಲಗಿ | 5.00 |
| 14 | ಮಾವೂರದಿಂದ ಪಿ.ಬಿ. ರಸ್ತೆ ಕೂಡು ರಸ್ತೆ ಮಾರ್ಗ ಚಿಕ್ಕಬೂದಿಹಾಳ | 6.00 |
| | **ಒಟ್ಟು** | **81.20** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 489 ಸಿಆರ್‌ಎಂ 2008, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ಹಾವೇರಿ ಜಿಲ್ಲೆಯ ವ್ಯಾಪ್ತಿಯ ಹಾವೇರಿ ಮತ್ತು ಸವಣೂರು ತಾಲ್ಲೂಕುಗಳು ಒಟ್ಟು 135.65 ಕಿ.ಮೀ ಉದ್ದದ ಈ ಕೆಳಕಂಡ 28 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| | **ಹಾವೇರಿ ತಾಲ್ಲೂಕು** | |
| 1 | ಹಾವೇರಿ–ದೇವಗಿರಿ ರಸ್ತೆ | 7.00 |
| 2 | ದೇವಗಿರಿ–ಮೆಳ್ಳಾಗಟ್ಟಿ ರಸ್ತೆ (ತಾಲ್ಲೂಕು ಹದ್ದಿನವರೆಗೆ) | 3.40 |
| 3 | ಕನಕಾಪುರ–ಬನ್ನಿಹಳ್ಳಿ ರಸ್ತೆ ಮಾರ್ಗ ಭೂ ಕೋಡಿಹಳ್ಳಿ ಕಲ್ಲಾಪುರ | 5.60 |
| 4 | ಬಿ.ಪಿ. ರಸ್ತೆಯಿಂದ ನಾಗನೂರಿಗೆ ಕೂಡುವ ರಸ್ತೆ | 2.80 |
| 5 | ನಾಗನೂರ–ಕೂಡಲ ರಸ್ತೆ (ತಾಲ್ಲೂಕು ಹದ್ದಿನವರೆಗೆ) | 2.50 |
| 6 | ಕಬ್ಬೂರ–ಹಿರೇಲಿಂಗದಹಳ್ಳಿ ರಸ್ತೆ | 4.30 |
| 7 | ಹಿರೇಲಿಂಗದ ಹಳ್ಳಿ–ಕಲ್ಲಾಪುರ ರಸ್ತೆ | 3.00 |
| 8 | ಕಲ್ಲಾಪುರ–ಕುರುಬಗೊಂಡ ರಸ್ತೆ | 1.50 |
| 9 | ಕುರುಬಗೊಂಡ–ಮಲ್ಲೂರ ರಸ್ತೆ | 2.50 |
| 10 | ಹೊಂಬರಡಿ–ಕುರುಬಗೊಂಡ ರಸ್ತೆ | 5.00 |
| 11 | ಹಾವೇರಿ–ಕೆರಿಮತ್ತಿನಹಳ್ಳಿ ರಸ್ತೆ | 6.00 |
| 12 | ಕೆರಿಮತ್ತಿನಹಳ್ಳಿ–ಹಿರೇಲಿಂಗದಹಳ್ಳಿ ರಸ್ತೆ | 3.50 |
| 13 | ಹೊಸಳ್ಳಿ–ಬೆಂಚಿಹಳ್ಳಿ ರಸ್ತೆ ಮಾರ್ಗ ದೇವಿಹೊಸೂರ | 7.00 |
| 14 | ಬ್ಯಾಡಗಿ–ತಿಳವಳ್ಳಿ ರಸ್ತೆಯಿಂದ ಸೂಡಂಬಿ–ಕಬ್ಬೂರ ರಸ್ತೆಗೆ ಕೂಡು ರಸ್ತೆ | 0.35 |
| | **ಒಟ್ಟು** | **54.45** |
| | **ಸವಣೂರು ತಾಲ್ಲೂಕು** | |
| 1 | ಮಣ್ಣೂರು–ಚಿಕ್ಕನಲ್ಲೂರು ರಸ್ತೆ | 4.00 |
| 2 | ಹುರಳಿಕುಪ್ಪಿ–ಕುರುಬರಮಲ್ಲೂರು ರಸ್ತೆ (ಸವಣೂರು–ಹರವಿ ರಸ್ತೆಗೆ ಕೂಡುವುದು) | 4.00 |
| 3 | ಹತ್ತಿ ಮತ್ತೂರದಿಂದ ಹಳ್ಳಿಹಳ್ಳಿ ರೈಲ್ವೆ ಗೇಟ್‌ವರೆಗೆ ರಸ್ತೆ | 4.00 |
| 4 | ಚಿಲ್ಲೂರದಿಂದ ಸವಣೂರು ರಸ್ತೆ | 4.00 |
| 5 | ಹಿರೇಮುಗದೂರ–ಕಡಕೋಳ ರಸ್ತೆ ಮಾರ್ಗ ಕೃಷ್ಣಾಪುರ–ಕಮಲಬಂದಗಿ–ತಿಮ್ಮಾಪುರ–ಬಸವಕೊಪ್ಪ–ತಾಲ್ಲೂಕು ಹದ್ದಿನವರೆಗೆ | 21.00 |
| 6 | ಮಂತ್ರೋಡಿಯಿಂದ ಜೇಕಿನಕಟ್ಟಿ ರಸ್ತೆ ಹಿರೇಮಲ್ಲೂರು ಪ್ಲಾಟ್‌ವರೆಗೆ | 3.50 |
| 7 | ಕುರುಬರಮಲ್ಲೂರ–ಮನ್ನಂಗಿ ರಸ್ತೆ | 4.00 |
| 8 | ಸಿದ್ದಾಪುರದಿಂದ ಕಲಿವಾಳ ರಸ್ತೆ | 5.00 |
| 9 | ಕಡಕೋಳ–ಹೆಸರೂರ ರಸ್ತೆ | 5.20 |

| | | |
|---|---|---|
| 10 | ಕಡಕೋಳ–ಹಿರೆಮಳ್ಳಿಹಳ್ಳಿ ರಸ್ತೆ | 6.00 |
| 11 | ಹತ್ತಿಮತ್ತೂರ–ಮಂಟಗಣಿ ರಸ್ತೆ | 6.00 |
| 12 | ಜಲ್ಲಾಪುರ–ಶಿರಬಡಗಿ ರಸ್ತೆ | 3.50 |
| 13 | ಸವಣೂರು–ಶಿಗ್ಗಾಂವ ರಸ್ತೆಯಿಂದ ಕಾರವಾರ–ಇಳಕಲ್ ರಸ್ತೆ ಮಾರ್ಗ ಹೊಸನೀರಲಗಿ | 5.00 |
| 14 | ಮಾವೂರದಿಂದ ಪಿ.ಬಿ. ರಸ್ತೆ ಕೂಡು ರಸ್ತೆ ಮಾರ್ಗ ಚಿಕ್ಕಬೂದಿಹಾಳ | 6.00 |
| | **ಒಟ್ಟು** | **81.20** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,(ಸಂಪರ್ಕ)

**ವಿಷಯ:** ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೆರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರ ಪತ್ರಸಂಖ್ಯೆ:ಮುಇಂ/ಸಂಕದ/ರಶಾ/.ಸಇ೦1/2008–09, ದಿನಾಂಕ;3–7–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ರಾಜ್ಯ ಹೆದ್ದಾರಿ–19ರ ಕಿ.ಮೀ 195.50 ರಿಂದ ಹುಚ್ಚವ್ವನಹಳ್ಳಿಗೆ ಸೇರುವ ರಸ್ತೆ | 4.00 |
| 2 | ರಾಜ್ಯ ಹೆದ್ದಾರಿ–48 ರಿಂದ ರಾಜ್ಯ ಗಡಿ ಜಿಲ್ಲಾ ಮುಖ್ಯ ರಸ್ತೆಯ 21.20 ಕಿ.ಮೀ. ನಿಂದ ರಾಜ್ಯ ಗಡೆ ಸೇರುವ ರಸ್ತೆ ಮಾರ್ಗ ಹಲಗದಿದ್ದ ಖಂಡೇನಹಳ್ಳಿ | 10.00 |
| 3 | ಇಕ್ಕನೂರಿನಿಂದ ವೇಣುಕಲ್ಲುಗುಡ್ಡ–ಹರಿಯಬ್ಬೆ ರಸ್ತೆ ಮಾರ್ಗ ಕೋಡಿಹಳ್ಳಿ | 16.00 |
| 4 | ರಾಜ್ಯ ಹೆದ್ದಾರಿ–24ರ 114.20 ಕಿ.ಮೀ ಮೇಟಿಕುರ್ಕೆ ಶಿಡ್ಲಯ್ಯನಕೋಟೆ ರಸ್ತೆಯ 18.00 ಕಿ.ಮೀಗೆ ಸೇರುವ ರಸ್ತೆ ಮಾರ್ಗ ಬಿದರಕೆರೆ | 6.50 |
| 5 | ರಾಜ್ಯ ಹೆದ್ದಾರಿ–24 ರ 117.00 ಕಿ.ಮೀ ನಿಂದ ಬಬ್ಬೂರು ಶಿರಾಗಡಿ ರಸ್ತೆಯ 18.20 ಕಿ.ಮೀ.ಗೆ ಸೇರುವ ರಸ್ತೆ ಮಾರ್ಗ ಹೂವಿನಹೊಳೆ, ಮ್ಯಾದನಹೊಳೆ | 11.00 |
| 6 | ರಾಷ್ಟ್ರೀಯ ಹೆದ್ದಾರಿ–4ರ 142.00 ಕಿ.ಮೀ ನಿಂದ ರಾಷ್ಟ್ರೀಯ ಹೆದ್ದಾರಿ–4ರ 149.00 ಕಿ.ಮೀ ವರೆಗೆ ಸೇರುವ ರಸ್ತೆ ಮಾರ್ಗ ಆನೆಸಿದ್ರಿ, ಕಾಟನಾಯಕನಹಳ್ಳಿ ಬಗ್ಗನಾಡು, ವಡ್ಡನಹಳ್ಳಿ | 9.00 |
| 7 | ರಾಜ್ಯ ಹೆದ್ದಾರಿ–24–ಭರಂಪುರ ರಸ್ತೆಯ 19.20 ಕಿ.ಮೀ ನಿಂದ ಹಿರಿಯೂರು ವಿ.ವಿ.ಪುರ ರಸ್ತೆಯಿಂದ ಕೊಳಾಳು ರಸ್ತೆಯ 16.60 ಕಿ.ಮೀ ವರೆಗೆ ಸೇರುವ ರಸ್ತೆಯ ಮಾರ್ಗ ಕೆ.ಸಿ. ರೊಪ್ಪ ಗೋಪಾಲಪುರ | 8.40 |
| | **ಒಟ್ಟು** | **64.90** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 441 ಸಿಆರ್‌ಎಂ 2008, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಒಟ್ಟು 64.90 ಕಿ.ಮೀ ಉದ್ದದ ಈ ಕೆಳಕಂಡ ಏಳು (7) ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ರಾಜ್ಯ ಹೆದ್ದಾರಿ–19ರ ಕಿ.ಮೀ 195.50 ರಿಂದ ಹುಚ್ಚವ್ವನಹಳ್ಳಿಗೆ ಸೇರುವ ರಸ್ತೆ | 4.00 |
| 2 | ರಾಜ್ಯ ಹೆದ್ದಾರಿ–48 ರಿಂದ ರಾಜ್ಯ ಗಡಿ ಜಿಲ್ಲಾ ಮುಖ್ಯ ರಸ್ತೆಯ 21.20 ಕಿ.ಮೀ. ನಿಂದ ರಾಜ್ಯ ಗಡೆ ಸೇರುವ ರಸ್ತೆ ಮಾರ್ಗ ಹಲಗದಿದ್ದ ಖಂಡೇನಹಳ್ಳಿ | 10.00 |
| 3 | ಇಕ್ಕನೂರಿನಿಂದ ವೇಣುಕಲ್ಲುಗುಡ್ಡ–ಹರಿಯಬ್ಬೆ ರಸ್ತೆ ಮಾರ್ಗ ಕೋಡಿಹಳ್ಳಿ | 16.00 |
| 4 | ರಾಜ್ಯ ಹೆದ್ದಾರಿ–24ರ 114.20 ಕಿ.ಮೀ ಮೇಟಿಕುರ್ಕೆ ಶಿಡ್ಲಯ್ಯನಕೋಟೆ ರಸ್ತೆಯ 18.00 ಕಿ.ಮೀಗೆ ಸೇರುವ ರಸ್ತೆ ಮಾರ್ಗ ಬಿದರಕೆರೆ | 6.50 |
| 5 | ರಾಜ್ಯ ಹೆದ್ದಾರಿ–24 ರ 117.00 ಕಿ.ಮೀ ನಿಂದ ಬಬ್ಬೂರು ಶಿರಾಗಡಿ ರಸ್ತೆಯ 18.20 ಕಿ.ಮೀ.ಗೆ ಸೇರುವ ರಸ್ತೆ ಮಾರ್ಗ ಹೂವಿನಹೊಳೆ, ಮ್ಯಾದನಹೊಳೆ | 11.00 |
| 6 | ರಾಷ್ಟ್ರೀಯ ಹೆದ್ದಾರಿ–4ರ 142.00 ಕಿ.ಮೀ ನಿಂದ ರಾಷ್ಟ್ರೀಯ ಹೆದ್ದಾರಿ–4ರ 149.00 ಕಿ.ಮೀ ವರೆಗೆ ಸೇರುವ ರಸ್ತೆ ಮಾರ್ಗ ಆನೆಸಿದ್ರಿ, ಕಾಟನಾಯಕನಹಳ್ಳಿ ಬಗ್ಗನಾಡು, ವಡ್ಡನಹಳ್ಳಿ | 9.00 |
| 7 | ರಾಜ್ಯ ಹೆದ್ದಾರಿ–24–ಭರಂಪುರ ರಸ್ತೆಯ 19.20 ಕಿ.ಮೀ ನಿಂದ ಹಿರಿಯೂರು ವಿ.ವಿ.ಪುರ ರಸ್ತೆಯಿಂದ ಕೊಳಾಳು ರಸ್ತೆಯ 16.60 ಕಿ.ಮೀ ವರೆಗೆ ಸೇರುವ ರಸ್ತೆಯ ಮಾರ್ಗ ಕೆ.ಸಿ. ರೊಪ್ಪ ಗೋಪಾಲಪುರ | 8.40 |
| | **ಒಟ್ಟು** | 64.90 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,(ಸಂಪರ್ಕ)

**ವಿಷಯ:** ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರ ಪತ್ರಸಂಖ್ಯೆ:ಮುಇಂ/ಸಂಕದ/ರಶಾ/.ಸಇಂ2/2008–09, ದಿನಾಂಕ:23.8.2008 ಮತ್ತು 8.9.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರು ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ಬ್ಯಾಡರಹಳ್ಳಿಯಿಂದ ಕರಡಿಗೆರೆ ಮಾರ್ಗ ನಾಗಮಂಗಲ ಗಡಿಯವರೆಗೆ ರಸ್ತೆ | 7.00 |
| 2 | ಜಡೆಯದಿಂದ ದಾಸರಹಳ್ಳಿ ಕಣಕೂರು ಮಾರ್ಗ ಕೆ. ದೊಡ್ಡೇರಿ ಸೇರುವ ರಸ್ತೆ. | 6.00 |
| 3 | ಬಿಡಿಟಿ ರಸ್ತೆಯಿಂದ ವಡೇರಹಳ್ಳಿ ಎಸ್ ಎಸ್ ರಸ್ತೆ ಬ್ಯಾಲ ರಸ್ತೆ ಮಲದೇವನ ಹಳ್ಳಿ ಗ್ರಾಮ ಗುಬ್ಬಿ ಗಡಿಯವರೆಗೆ | 10.00 |
| 4 | ಹೆಗ್ಗೆರೆ ಮಾರಸಂದ್ರ ಬಿಹೆಚ್ ರಸ್ತೆ | 10.00 |

| | | |
|---|---|---|
| 5 | ಅರೇನಹಳ್ಳಿ ಕಲ್ಲೂರು ರಸ್ತೆಯಿಂದ ಕುರುಬರಹಳ್ಳಿ ಕೊಪ್ಪ ಮಾರ್ಗ ಗುಬ್ಬಿ ತಾಲ್ಲೂಕು ಗಡಿ ಸೇರುವ ರಸ್ತೆ | 5.00 |
| | **ಒಟ್ಟು** | **38.00** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 485 ಸಿಆರ್‌ಎಂ 2008, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕಿನ ಒಟ್ಟು 38.00 ಕಿ.ಮೀ ಉದ್ದದ ಈ ಕೆಳಕಂಡ 5 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ಬ್ಯಾಡರಹಳ್ಳಿಯಿಂದ ಕರಡಿಗೆರೆ ಮಾರ್ಗ ನಾಗಮಂಗಲ ಗಡಿಯವರೆಗೆ ರಸ್ತೆ | 7.00 |
| 2 | ಜಡೆಯದಿಂದ ದಾಸರಹಳ್ಳಿ ಕಣಕೂರು ಮಾರ್ಗ ಕೆ. ದೊಡ್ಡೇರಿ ಸೇರುವ ರಸ್ತೆ. | 6.00 |
| 3 | ಬಿಡಿಟಿ ರಸ್ತೆಯಿಂದ ವಡೇರಹಳ್ಳಿ ಎಸ್ ಎಸ್ ರಸ್ತೆ ಬ್ಯಾಲ ರಸ್ತೆ ಮಲದೇವನ ಹಳ್ಳಿ ಗ್ರಾಮ ಗುಬ್ಬಿ ಗಡಿಯವರೆಗೆ | 10.00 |
| 4 | ಹೆಗ್ಗೆರೆ ಮಾರಸಂದ್ರ ಬಿಹೆಚ್ ರಸ್ತೆ | 10.00 |
| 5 | ಅರೇನಹಳ್ಳಿ ಕಲ್ಲೂರು ರಸ್ತೆಯಿಂದ ಕುರುಬರಹಳ್ಳಿ ಕೊಪ್ಪ ಮಾರ್ಗ ಗುಬ್ಬಿ ತಾಲ್ಲೂಕು ಗಡಿ ಸೇರುವ ರಸ್ತೆ | 5.00 |
| | **ಒಟ್ಟು** | **38.00** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1343

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,(ಸಂಪರ್ಕ)

## ನಗರಾಭಿವೃದ್ಧಿ ಸಚಿವಾಲಯ

ಹಾಲಿ ಚಿಕ್ಕಬಳ್ಳಾಪುರ ನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹೊಸದಾಗಿ ಸೇರ್ಪಡಿಸಲು ಉದ್ದೇಶಿಸಿರುವ ಗ್ರಾಮಗಳ ವಿವರಗಳು.

| ಕ್ರ. ಸಂ | ಪಂಚಾಯಿತಿ ಹೆಸರು | ಗ್ರಾಮದ ಹೆಸರು | ವಿಸ್ತೀರ್ಣ ಹೆಕ್ಟೇರುಗಳಲ್ಲಿ | ಜನಸಂಖ್ಯೆ 2001 ರಂತೆ |
|---|---|---|---|---|
| 1 | 2 | 3 | 4 | 5 |
| | **ಹಾಲಿ ಗ್ರಾಮಗಳು** | | | |
| 1 | ಚಿಕ್ಕಬಳ್ಳಾಪುರ ನಗರ | | | |
| 2 | ಜೇಡಲತಿಮ್ಮನಹಳ್ಳಿ | | | |
| 3 | ವಾಪಸಂದ್ರ | | | |
| 4 | Lower Orchirds of Sidlaghatta | | | |
| 5 | ಅಂಕನಗೊಂದಿ (ಭಾಗಶಃ) | | | |
| 6 | ಗಂಗನವಿದ್ದೆ | | | |
| 7 | Lower Orchirds of Ankanagundi | | | |
| 8 | ಕಂದವಾರ ಗ್ರಾಮ | | | |
| | | | 850 | 54968 |
| | **ಪ್ರಸ್ಥಾವಿತ ಗ್ರಾಮಗಳು** | | | |

| | | | | |
|---|---|---|---|---|
| 1 | ತಿಪ್ಪೇನಹಳ್ಳಿ | 1. ತಿಪ್ಪೇನಹಳ್ಳಿ | 535 | 2132 |
| | | 2. ದಿನ್ನೇಹೊಸಹಳ್ಳಿ | 150.95 | 590 |
| | | 3. ನಲ್ಲೇನಹಳ್ಳಿ (ಬೆ) | 48.15 | 7 |
| | | 4. ಬೈರೋಜನಹಳ್ಳಿ | 49.37 | 246 |
| | | 5. ಪಾವಂಡಹಳ್ಳಿ | 70.41 | 5 |
| | | 6. ಮುಸ್ಟೂರು | 268.71 | 2186 |
| | | 7. ಕಣಜೇನಹಳ್ಳಿ | 284.61 | 784 |
| | | 8. ಅಂಕನಗೊಂದಿ (ಭಾಗಶಃ) | 84.17 | – |
| | | | | |
| 2 | ಹಾರೋಬಂಡೆ | 9. ಹಾರೋಬಂಡೆ | 287.73 | 1773 |
| | | 10. ಗೊಂಡಿಹಳ್ಳಿ | 90.24 | 154 |
| | | 11. ಹೊನೇಗಲ್ | 350.00 | 714 |
| | | 12. ಬೂರುಗಮಾಕಲಹಳ್ಳಿ | 95.00 | 5 |
| | | 13. ಮರಸನಹಳ್ಳಿ | 127.88 | 1084.00 |
| | | 14. ಅಕಲತಿಮ್ಮನಹಳ್ಳಿ | 98.00 | 236.00 |
| | | | | |
| 3 | ಆವಲಗುರ್ಕಿ | 15. ಆವಲಗುರ್ಕಿ | 977.74 | 1909 |
| | | 16. ಅರಿಕೆರೆ | 163.49 | 589 |
| | | 17. ಲಿಂಗಶೆಟ್ಟಿಪುರ | 92.67 | 475 |
| | | 18. ಕವರನಹಳ್ಳಿ | 289.76 | 645 |
| | | 19. ಗೇರಹಳ್ಳಿ | 152.16 | 652 |
| | | 20. ಹೊನ್ನೇನಹಳ್ಳಿ | 122.21 | 702 |
| | | 21. ಸೂಲಿಕುಂಟೆ | 224.00 | 442 |
| | | 22. ನಡುವನಹಳ್ಳಿ | 232.00 | 160 |
| | | 23. ಗುವಲಕನಹಳ್ಳಿ | 316.86 | 678 |
| | | 24. ದೇವಸ್ಥಾನಹೊಸಹಳ್ಳಿ | 297.84 | 1005 |
| | | | | |
| 4 | ಮಂಚನಬೆಲೆ | 25. ಮಂಚನಬೆಲೆ | 197.49 | 3330 |
| | | 26. ಗುಂಡ್ಲುಗುರ್ಕಿ | 653.00 | 236 |
| | | 27. ಅಮಾನಿಮಂಚನಬೆಲೆಕೆರೆ | 219.75 | – |
| | | 28. ಸಬ್ಬೇನಹಳ್ಳಿ | 201.94 | 714 |
| | | 29. ಪುಟ್ಟತಿಮ್ಮನಹಳ್ಳಿ | 73.24 | 352 |
| | | 30. ಈತಮಾಕಲಹಳ್ಳಿ | 163.09 | 165 |
| | | 31. ಕಾಮಶೆಟ್ಟಿ ಹಳ್ಳಿ | 767.00 | – |
| | | 32. ಅಮಾನಿಮಾವುಕೆರೆ (ಬೆ) | 133.54 | – |
| | | | | |
| 5 | ಪಟ್ರೇನಹಳ್ಳಿ | 33. ಪಟ್ರೇನಹಳ್ಳಿ | 114.52 | 1393 |
| | | 34. ಅಮಾನಿಗೋಪಾಲಕೃಷ್ಣಕೆರೆ | 377.17 | |
| | | 35. ಮರಿಮಾಕಲಹಳ್ಳಿ | 83.77 | 48 |
| | | 36. ಮುತ್ತುಕದಹಳ್ಳಿ | 113.31 | 300 |
| | | 37. ಅಂದಾರ್ಲಹಳ್ಳಿ | 118.17 | 1055 |

| | | | | |
|---|---|---|---|---|
| | | 38. ತಾಂಡ್ರಮರದಹಳ್ಳಿ | 126.26 | 412 |
| | | 39. ಅಡವಿಗೊಲ್ಲವಾರಹಳ್ಳಿ | 800.00 | 767 |
| | | 40. ಅಣಕನೂರು | 326.99 | 999 |
| | | | | |
| 6 | ಅಜ್ಜವಾರ | 41. ಅಜ್ಜವಾರ | 433.02 | 1417 |
| | | 42. ಸೊನ್ನಾಪುರ | 40.06 | 179 |
| | | 43. ನಾಯನಹಳ್ಳಿ | 84.17 | 1416 |
| | | 44. ಮನ್ನಾರಪುರ | 51.00 | 594 |
| | | 45. ದೊಡ್ಡಕಿರುಗಂಬಿ | 199.50 | 772 |
| | | 46. ನೂಗತಿಹಳ್ಳಿ | 297.85 | 718 |
| | | 47. ಬನ್ನಿಕುಪ್ಪೆ | 178.47 | 640 |
| | | 48. ವರದಹಳ್ಳಿ | 158.22 | 396 |
| | | | | |
| 7 | ಕೊಂಡೇನಹಳ್ಳಿ | 49. ಕೊಂಡೇನಹಳ್ಳಿ | 410.00 | 734 |
| | | 50. ಸಂಬಾರದಗಿಡದಕಾದಲು | 781.43 | – |
| | | 51. ಕಣಿತಹಳ್ಳಿ | 1236.00 | 1856 |
| | | 52. ತೌಡನಹಳ್ಳಿ | 480.00 | 640 |
| | | 53. ನಕ್ಕಲಬಚ್ಚಹಳ್ಳಿ | 294.00 | 407 |
| | | 54. ಬೊಮ್ಮನಹಳ್ಳಿ | 153.77 | 588 |
| | | 55. ಹಿರೇಪಡೆ (ಬೆ) | 27.51 | – |
| | | 56. ಕಡುಶಿಗೇನಹಳ್ಳಿ | 180.00 | 927 |
| | | 57. ಗೊಲ್ಲಪಡೆ (ಬೆ) | – | – |
| | | 58. ತಿಮ್ಮನಹಳ್ಳಿ | 178.86 | 646 |
| | | | | |
| 8 | ಅಗಲಗುರ್ಕಿ | 59. ಅಗಲಗುರ್ಕಿ | 253.74 | 1955 |
| | | 60. ಚೀಡಚಿಕ್ಕನಹಳ್ಳಿ | 165.11 | 408 |
| | | 61. ಚೊಕ್ಕಹಳ್ಳಿ | 248.07 | 642 |
| | | 62. ಚಿಕ್ಕದೀಗನಹಳ್ಳಿ | 127.47 | 636 |
| | | 63. ಶ್ರೀರಾಮಪುರ | 519.00 | 117 |
| | | 64. ಜೀಡಲತಿಮ್ಮಹಳ್ಳಿ (ಚಲುವ ತಿಮ್ಮನಹಳ್ಳಿ) | 145.68 | 802 |
| 9 | ದೊಡ್ಡಮರಳಿ | 65. ದೊಡ್ಡಮರಳಿ | 223.79 | 1516 |
| | | 66. ಚದಲಪುರ | 146.09 | 893 |
| | | 67. ಬೀಡಗಾನಹಳ್ಳಿ | 132.33 | 783 |
| | | 68. ಕೊಳವನಹಳ್ಳಿ | 294.61 | 1196 |
| | | 69. ದೇವಿಶೆಟ್ಟಿಹಳ್ಳಿ | 124.65 | 530 |
| | | 70. ವರಮಲ್ಲೇಹಳ್ಳಿ | 72.03 | 122 |
| | | 71. ದೊಡ್ಡಮರಳಿ ಅಮಾನಿಕೆರೆ | 101.57 | 10 |
| | | 72. ಯಲುವಹಳ್ಳಿ | 191.01 | 778 |
| | | | | |
| 10 | ಕುಪ್ಪಹಳ್ಳಿ | 73. ಕುಪ್ಪಹಳ್ಳಿ | 210.44 | 1306 |

| | | | | |
|---|---|---|---|---|
| | | 74. ಕುಡುವತಿ | 402.25 | 1605 |
| | | 75. ಅಂಗಟ್ಟಿ | 272.75 | 655 |
| | | 76. ಅರಸನಹಳ್ಳಿ | 107.24 | 579 |
| | | 77. ಕೊತ್ತನೂರು | 137.19 | 807 |
| | | 78. ತೀರ್ಣಹಳ್ಳಿ | 193.44 | 478 |
| | | 79. ತುಮಕಲಹಳ್ಳಿ | 108.86 | 215 |
| | | 80. ಮಾವಹಳ್ಳಿ | 59.08 | 370 |
| | | 81. ಚಿಕ್ಕಸಾಗರಹಳ್ಳಿ | 74.05 | 197 |
| | | | | |
| 11 | ನಂದಿ | 82. ನಂದಿ | 652.00 | 2686 |
| | | 83. ನಾರೇಮ್ಮನಹಳ್ಳಿ | 242.00 | 284 |
| | | | | |
| 12 | ಮುದ್ದೇನಹಳ್ಳಿ | 84. ಮುದ್ದೇನಹಳ್ಳಿ | 28.32 | 255 |
| | | 85. ಕಳವಾರ (ಭಾಗಶಃ) | 291.20 | 982 |
| | | 86. ಮೈಲಪ್ಪನಹಳ್ಳಿ | 153.37 | 1287 |
| | | 87. ಗಂಟೆಗಾನಹಳ್ಳಿ | 65.56 | 174 |
| | | 88. ಬಂಡಹಳ್ಳಿ | 41.68 | 463 |
| | | 89. ಚಿಕ್ಕಮುದ್ದನಹಳ್ಳಿ | 66.77 | 715 |
| | | 90. ಬಚ್ಚಹಳ್ಳಿ | 86.20 | 404 |
| | | | 20999.60 ಹೆ | 62724 |
| 1 | ಹೊಸದಾಗಿ ಸೇರ್ಪಡೆಯಗಲಿರುವ ಸ್ಥಳಿಯ ಯೋಜನಾ ಪ್ರದೇಶದ ವಿವರ | | 210.00 ಚ.ಕಿ.ಮೀ | 62724 |
| 2 | ಹಾಲಿ ಸ್ಥಳೀಯ ಯೋಜನಾ ಪ್ರದೇಶದ ವಿವರ | | 8.50. ಚ.ಕಿ.ಮೀ | 54968 |
| | | **ಒಟ್ಟು** | **218.50 ಚ.ಕಿ.ಮೀ** | **1,17,692 ಜನಸಂಖ್ಯೆ** |

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,

**ಅನುಬಂಧ–II**

**ವಿಸ್ತರಿಸಲು ಉದ್ದೇಶಿಸಿರುವ ಚಿಕ್ಕಬಳ್ಳಾಪುರ ನಗರದ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರ**

ಉದ್ದೇಶಿತ ಚಿಕ್ಕಬಳ್ಳಾಪುರ ನಗರದ ಸ್ಥಳಿಯ ಯೋಜನಾ ಪ್ರದೇಶದ ಎಲ್ಲೆಯು ಈಶಾನ್ಯ ಮೂಲೆಯಲ್ಲಿನ ಚಿಕ್ಕಬಳ್ಳಾಪುರದಿಂದ ಬಳ್ಳಾರಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿ ಹಾಗೂ ಗುವ್ವಲಹಳ್ಳಿ ಗ್ರಾಮದ ಉತ್ತರದ ಗಡಿಯು ಸಂಧಿಸುವ ಬಿಂದುವಿನಿಂದ ಪ್ರಾರಂಭವಾಗಿ ಪಶ್ಚಿಮಾಭಿಮುಖವಾಗಿ ತಿರುಗಿ ನಡುವನಹಳ್ಳಿ, ಸೂಲೆಕುಂಟೆ, ಆವಲಗುರ್ಕಿ ಗ್ರಾಮಗಳ ಉತ್ತರದ ಗಡಿಯ, ಮೂಲಕ ಹೊರಟು ನಂತರ ದಕ್ಷಿಣಾಭಿಮುಖವಾಗಿವಾಗಿ ಅಂಕಣಗೊಂದಿ ಗ್ರಾಮದ ಪಶ್ಚಿಮದ ಗಡಿಯಲ್ಲಿ ಸಾಗಿ ತಿಪ್ಪೇನಹಳ್ಳಿ ಗ್ರಾಮದ ಗಡಿಯನ್ನು ತಲುಪಿ ಇದೇ ಗ್ರಾಮದ ಗಡಿಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿದ ನಂತರ ಇದೇ ಗ್ರಾಮದ ಗಡಿಯಲ್ಲಿ ಪೂರ್ವಾಭಿಮುಖವಾಗಿ ಚಲಿಸುತ್ತಾ ಕಣಜೇನಹಳ್ಳಿಯ ದಕ್ಷಿಣ ಗಡಿಯಲ್ಲಿಯೇ ಚಲಿಸಿ, ಕಳವಾರ ಗ್ರಾಮದ ಸ.ನಂ. 133, 130, 121, 123,163, 126,160,161,162, 88, 86,85,82,80,54,44,43,42,40 ರ ಪಶ್ಚಿಮ ಗಡಿಯಲ್ಲಿಯೇ ಚಲಿಸುತ್ತಾ ಇದೇ ಗ್ರಾಮದ ಸ.ನಂ. 33,24,23,22 ರ ಪಶ್ಚಿಮದ ಗಡಿಯಲ್ಲಿ ಹಾಯ್ದು ಗಂಟಿಗಾನಹಳ್ಳಿ, ಮುದ್ದೇನಹಳ್ಳಿ, ಚಿಕ್ಕಮುದ್ದನಹಳ್ಳಿ, ನಾರಮ್ಮನಹಳ್ಳಿ, ನಂದಿ ಅಂಗಟ್ಟ ಕುಡುವತಿ ಗ್ರಾಮಗಳ ಪಶ್ಚಿಮದ ಗಡಿಯಲ್ಲಿ ಹಾಯ್ದು ದೊಡ್ಡಬಳ್ಳಾಪುರ–ಚಿಕ್ಕಬಳ್ಳಾಪುರ ರಾಜ್ಯ ಹೆದ್ದಾರಿಗೆ ತಲುಪುತ್ತದೆ. ನಂತರ ಪೂರ್ವಾಭಿಮುಖವಾಗಿ ಚಿಕ್ಕಬಳ್ಳಾಪುರ ದಕ್ಷಿಣ ಗಡಿಯಲ್ಲಿ ಹಾಯ್ದುಹೋಗಿ, ಕಾಡಶೀಗೇಹಳ್ಳಿ, ಕೆಂಚೇನಹಳ್ಳಿ, ಮನ್ನಾರಪುರ, ದೊಡ್ಡಕಿರುಗಂಭಿ ನುಗಿತಹಳ್ಳಿ ಗ್ರಾಮಗಳ ಉತ್ತರದ ಗಡಿಯಲ್ಲಿ

ಹಾಯ್ದು ವರದಹಳ್ಳಿಯ ದಕ್ಷಿಣದ ಗಡಿ ಹಾಗೂ ಚಿಕ್ಕಬಳ್ಳಾಪುರ–ಶಿಡ್ಲಘಟ್ಟ ರಸ್ತೆಯನ್ನು ತಲುಪುತ್ತದೆ. ನಂತರ ವರದಹಳ್ಳಿ ಗ್ರಾಮದ ಪೂರ್ವ ಗಡಿಯಲ್ಲಿಯೇ ಉತ್ತರಾಭಿಮುಖವಾಗಿ ಚಲಿಸುತ್ತಾ ಪಶ್ಚಿಮ ದಿಕ್ಕಿಗೆ ತಿರುಗಿ, ಮುತ್ತುಕದಹಳ್ಳಿ ಗ್ರಾಮದ ಗಡಿಯನ್ನು ತಲುಪಿ ಇದೇ ಗ್ರಾಮದ ಗಡಿಯನ್ನು ತಲುಪಿ ಸದರಿ ಗ್ರಾಮದ ಗಡಿಯ ಉತ್ತರ ದಿಕ್ಕಿನಲ್ಲಿ ಚಲಿಸಿ, ಅಡವಿಗೊಲ್ಲವಾರಹಳ್ಳಿ, ವರದಹಳ್ಳಿ, ಪುಟ್ಟತಿಮ್ಮನಹಳ್ಳಿ, ಕಾಮಶೆಟ್ಟಿಹಳ್ಳಿ, ಗುಂಡ್ಲಗುರ್ಕಿ, ದೇವಸ್ಥಾನಹೊಸಹಳ್ಳಿ ಗ್ರಾಮಗಳ ಪೂರ್ವ ದಿಕ್ಕಿನಲ್ಲಿ ಚಲಿಸುತ್ತಾ, ಗುವ್ವಲಹಳ್ಳಿ ಗ್ರಾಮ ಗಡಿ ತಲುಪಿ, ಇದೇ ಗ್ರಾಮದ ಗಡಿಯಲ್ಲಿ ಉತ್ತರ ದಿಕ್ಕಿಗೆ ಚಲಿಸಿ, ಚಿಕ್ಕಬಳ್ಳಾಪುರ–ಬಳ್ಳಾರಿ ರಸ್ತೆಯು ಸಂಧಿಸುವ ಬಿಂದುವಿಗೆ ಬಂದು ಪ್ರಾರಂಭದ ಬಿಂದುವಿನಲ್ಲಿ ಅಂತ್ಯಗೊಳ್ಳುತ್ತದೆ.

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್. 1348

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

**Sub:** Procurement of vehicles to Project Office-reg

**Read:** 1. Procurement Committee meeting held on 6.8.2008.

2. This Office Supply Order No. KHSDRP/KFW/SMEC-G/03/2007-08

**Preamble:-**

Karnataka Health System Development and Reform Project is also implementing the Kfw Project Phase-II M/s SMEC Consultants for Kfw have requested for 4 vehicles that will help their Engineers and Project authorities to monitor the works and progress under KHSDRP-KfW Projects effectively. It was decided to procure 4 vehicles suitable to Project authorities ands SMEC Consultans under the available Kfw grants.for supervising KfW works.

The technical specifications and model was selected by a team of experts like Chief Transport Officer. HEW Services Regional Transport Officer, Koramangala, Bangalore,. Chief Administrative Officer. Deputy Director
(Procurement), SMEC Consultant etc., Accordingly quotations were invited under National shopping Procedures fro m10 firms.

Shortilisting was carried as per procedure by the Procurement Committee and the Tender Evaluation Committee met on 6.8.2008 and finalised Procurement of 2 vehicles of BOLERO SLX MDITC 2 WD BS-111 model for Bangalore and 2 vehicles of BOLERO SLX MDITC 2 WD BS-11 MODEL FOR GULBARGA at the quoted rates of Rs. 5,26,517.00 and Rs. 5,16,559.00 respectively per vehicle The rates are exclusive of taxes and insurance/transportatio charges.

**Govt. Order No. HFW/KHSDRP/Sect/11/2008 Bangalore, Dated:11th September 2008**

Under the circumstances mentioned in the preamble. Government are pleased to approve the purchase of 2 vehicles of BOLERO SLX MDITC 2 WD BS-111 Model for Bangalore and 2 vehicles of BOLERO SLX MDITC 2 WD BS-11 MODEL for GULBARGA at the quoted rates o Rs. 5,26,517.00 at a total cost of Rs. 10.53,034/- for two vehicles and Rs. 5,16,559.00 per vehicle at a total cost of Rs. 10,33,118/-for 2 vehicles respectively from M/s Mahindra and Mahindra Ltd., Bangalore.

The entire expenditure of Rs. 23,46,921.01 (Rupees twentythree lakhs fortysix thousand nine hundred twentyone) only including Vat plus transportation and insurance charges shall be debited to the ``KfW Dispsition Fund'' during the year 2008-09.

By order and in the name of the Governor of Karnataka,

P.R. 1354

**SUSHAMA GODBOLE**

Deputy Secretary to Govt

KHSDRP

Health and Family Welfare Departmet

**INFRASTRUCTURE DEVELOPMENT SECRETARIAT**

**Sub:** Construction of ROB/RuBs in the State of Karnataka-entrustment of monitoring the progress by K-RIDE.

**Read:** 1. G.O.No. IDD 5 NSW 2000 dated:8.6.2000
2. G.O.No. IDD 4 NSW 2002 dated 15.5.2002
3 G.O.No. IDD O4 NSW 2002, dated 1.10.2002
4 Proceedings of the Steering, Committee meeting held on 15.9.2008.

**Preamble:-**

In G.O. read at (1) above, RITES was entrusted to carryout the preparation of GAD for construction of RoB/RuBs in the State of Karnataka.

2. In G.O. read at (2) above, sanction was accorded for payment of fees to RITES of the rate of 2% of the total cost of works and it was also indicated that the payment would be initially met out of the Project Development Fund of iDeCK. For this purpose DeCK used to draw up appropriate procedures for scrutinizing the claims made by RITES and to make payments.

3. In G.O. read at (3) above, schedule of payment of fees to RITES was decided and a Steering Committee was set up under the Chairmanship of Principal secretary. IDD with iDeCK as Member Secretary of the Committee to monitor the progress of construction of ROB/RuBs in the State.

4. In the proceedings of the Steering Committee meeting on RoB/RuBs in the State read at (4) above, it was decided to take over monitoring of the RoB/RuBs projects from iDeCK and hand it over to the Rail Infrastructure Development (Karnataka) Corporation Ltd., K-RIDE. Adecision has also been taken to entrust the work of monitoring the progress of all railway projects to K-RIDE and K-RIDE should act as a bridge between the State Government and the Railways.

5. Hence this order.

**Government Order No. IDD 49 NSW 2008, Bangalore, dated:10th November 2008**

In partial modification of the order No. IDD 4 NSW 2002, dated 1/10.10.2002 it, is hereby ordered that in futrure the concerned consultant agency (M/s RITES) should submit the proposal for payment of fees towards preparation of GAD including DPR with abstract cost estimates to CEO-K-RIDE, and CEO, K-RIDE after scrutinizing the same will make necessary recommendations for payment of the said amount to the Government and Government in IDD would verify the same and make necessary releases as per the existing orders.

In the Steering Committee set up to monitor the progress of construction of RoB/RuBs, CEO, K-RIDE will be the Member Secretary in place of Associate, iDeCK, the other members will continue as they are.

By order and in the name of the Governor of Karnataka,

**N. MANJULA GEETHA**

Under Secretary to Government,

Infrastructure Development Department

P.R. 1561

**ANIMAL HUSBANDRY & FISHERIES SECRETARIAT**

**Sub:** Defining "Minor eterinary Services" as per provisions of Section 30 (b) of I.V.C. Act 1984-reg.

**Read:** 1. Government Order No. AHF 208 VET 2007, dated 16.2.2008.

**Government Order No. AHF 208 VET 2007, Bangalore, Dated:20th September 2008**

In exercise of the powers conferred by clause (b) of section 30 of the Indian Veterinary Council Act, 1984 (52 of 1984) the Government of Karnataka hereby permit any person holding a Diploma or

Certificate of Veterinary Supervisor, Veterinary Inspector, Stockman or Stock Assistant issued by the Directorate of Animal Husbandry, Government of Karnataka or of any State or an equivalent qualification issued by any Veterinary Institution in India to render, under supervisior and direction of a registered Veterinary Practioners Minor Veterinary Services, in the State of Karnataka.

By order and in the name of the Governor of Karnataka,

P.R. 1451

**B.K. SRINIVASAMURTHY**

Under Secretary to Government

Animal Husbandry & Fisheries Department

**COMMERCE & INDUSTRIES SECRETARIAT**

**Sub:** Visit of Official delegation to Dubai from 19th to 23rd October 2008 to conduct the road show and to visit Industrial homes, Jebel Ali Free Zone and to attend GITEX Exhibition.

**Read:** 1. Letter dated 19..8.2008 from Dr. B.R. Shetty Managing Director & CEO, nmc.

**Preamble:**

As a measure to attract investment into the State of karnataka, the Government is proposing various programmes. Conducting Global Investors Meet [GIM] is one of such programme. In this regard, a meeting was conducted on 18.9.2008, under the Chairmanship of Hon'ble Chief Minister of Karnataka.

In the said meeting a decision was taken that Golbal Investors Meet will be held on 15th and 16 of January 2009 to attract more investment to Karnataka. In this direction meeting with Entrepreneurs and Road Shows need to be conducted. Recently, a high level delegation visited U.K. and USA and conducted many meetings, road shows, etc., Now in further, pursunce a programme is drawn to conduct a road show at Dubai to showcase the facilities available in Karnataka, to set up business/enterprises and also to attract investment into Karnataka.

In view of the above and to carry out the Government's intention to attract investment into the State of Karnataka it is proposed to .visit Dubai, UAE to conduct the road show and to visit industrial houses, Jebel Ali Free Zone and to attend GITEX Exhibition proposed to be held between 19th & 23rd October 2009 at Dubai.

Expenditure in this account is proposed to be met out of head of account of Industries and Commerce Department meant for "Infrastructure Support and Trade Promoters".

The Government has suggested to take up the above tour programme with the high level delegation. Hence, the order.

**G.O. No. CI 302 SPI 2008, Dated:15th October 2008**.

In the circumstances explained in the preamble, Government is pleased to release sum of Rs. 18 lakhs from head of Account 2852-80-800-0-46 modernization 125 infrastructure and trade promotion to meet the expenditure towards foreign tour of the delegation.

Besides the above, it is also intended to take business delegates to accompany the high level delegation.

Orders regarding approval of foreign tour of Hon;ble Chief Minister and Senior Officers & others is being issued by DPAR.

The Managing Director, Karnataka Udyog Mitra, Bangalore shall draw the above amount on payee receipt counter signed by the Commissioner for Induustial Development and Director of Industries and Commerece, Bangalore.

By order and in the name of the Governor of Karnataka,

P.R. 1426

**V. UMESH**

Prinicipal Secretary to Government

Commerce & Industries Department

**HORTICULTURE SECRETARIAT**

**Sub:** Karnataka State Horticulture Mssion Agency -Chief Executive Officer of State Medicinal Plant Board (SMPB ) to be a member of the State Level Executive Committee (SLEC)

**Read:** 1. Government Order No. AHD 38 HPP 2007 dated 14.2.2008.

2 Government of India letter No. 33-9/2007 Hort. Dated 10.7.2008.

**Government Order No. AHD 117 HPP 2008, Bangalore dated :23rd October 2008**

In pursuant of the Government Order read above, Government is pleased to nominate the Chief Executive Officer of State Medicinal Plant Board (SMPB) to be a member of the State Level Executive Committee (SLEC) The rest of the Constitution of the said Committee shall remain the same as per the Government Order read above.

This order comes into immedite effect.

By order and in the name of the Governor of Karnataka,

P.R. 1566

**S. RAJU**

Under Secretary to Government

Horticulture Department

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಧಾರವಾಡ ಮತ್ತು ಗುಲ್ಬರ್ಗಾ ಕೇಂದ್ರಗಳಲ್ಲಿ ಶಿಷ್ಠಾಚಾರ ಶಾಖೆಗಳನ್ನು ತೆರೆಯುವ ಬಗ್ಗೆ

**ಓದಲಾಗಿದೆ:** 1 ಪ್ರತ ಸಂಖ್ಯೆ:LCA-II 7/94 ದಿನಾಂಕ:10.1.1994, 23.12.1994,2.6.2006, 2.8.2006 ಮತ್ತು 11.1.2008.

2 ಸರ್ಕಾರದ ಆದೇಶ ಸಂಖ್ಯೆ:ಲಾ 137 ಎಲ್ ಏಸಿ 2005 ದಿನಾಂಕ:20.3.2008

**ಪ್ರಸ್ತಾವನೆ:**

ಕರ್ನಾಟಕ ಉಚ್ಚನ್ಯಾಯಾಲಯವು ಮೇಲೆ ಓದಲಾದ ಕ್ರಮಸಂಖ್ಯೆ:(1)ರ ಪತ್ರಗಳಲ್ಲಿ ರಾಜ್ಯದ ನಾಲ್ಕು ಜಿಲ್ಲಾ ಕೇಂದ್ರಗಳಲ್ಲಿ ಅಂದರೆ ಹಾಸನ, ಮಂಗಳೂರು, ಧಾರವಾಡ ಮತ್ತು ಗುಲ್ಬರ್ಗಾ, ಇಲ್ಲಿ ಶಿಷ್ಠಚಾರ ಶಾಖೆಗಳನ್ನು ಅತಿಥಿ ಸತ್ಕಾರ ಅಧಿಕಾರಿ ಹಾಗೂ ಇತರ ಅಗತ್ಯ ಸಿಬ್ಬಂದಿಯೊಂದಿಗೆ ಅಂದರೆ ಒಬ್ಬರು ಬೆರಳಚ್ಚುಗಾರರು, ಒಬ್ಬರು, ದ್ವಿತೀಯ ದರ್ಜೆ ಸಹಾಯಕರು ಇಬ್ಬರು ಅಟೆಂಡರುಗಳು ಮತ್ತು ಒಬ್ಬರು ಪ್ಯೂನ್, ಈ ಹುದ್ದೆಗಳೊಂದಿಗೆ ಪ್ರಾರಂಭಿಸಲು ಸರ್ಕಾರದ ಮಂಜೂರಾತಿಗಾಗಿ ಪ್ರಸ್ತಾವನೆ ಕಳುಹಿಸಿ ಸರ್ಕಾರದೊಂದಿಗೆ ಪತ್ರವ್ಯವಹಾರ ನಡೆಸಲಾಗಿರುತ್ತದೆ. ಮೇಲೆ ಓದಲಾದ ಕ್ರ.ಸಂ. (2)ರ ಸರ್ಕಾರದ ಆದೇಶದಲ್ಲಿ 19 ಅತಿಥಿ ಸತ್ಕಾರ ಅಧಿಕಾರಿಗಳನ್ನು ಸೃಜಿಸಲಾಗಿರುತ್ತದೆ. ಆದರೆ ಈಗ ಸದರಿ 19 ಅಥಿತಿ ಸತ್ಕಾರ ಅಧಿಕಾರಿಗಳ ಹುದ್ದೆಗಳನ್ನು ರದ್ದುಗೊಳಿಸಿ ಅವಶ್ಯಕ ಸಿಬ್ಬಂದಿಯೊಂದಿಗೆ ಶಿಷ್ಠಾಚಾರ ಶಾಖೆಗಳನ್ನು ಸ್ಥಾಪಿಸಲು ಚಿಂತನೆ ಮಾಡಲಾಗಿದೆ.

ಈ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿಲಾಗಿದೆ ಹಾಗೂ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲಾ 87 ಎಲ್‌ಸಿಇ 2006, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2008**

ಧಾರವಾಡ ಮತ್ತು ಗುಲ್ಬರ್ಗಾ ಕೇಂದ್ರಗಳಲ್ಲಿ ತಲಾ ಒಂದೊಂದು ಅತಿಥಿ ಸತ್ಕಾರ ಕಛೇರಿಯನ್ನು ಸ್ಥಾಪಿಸಲು ಹಾಗೂ ಸದರಿ ಕಛೇರಿಗಳಲ್ಲಿ ಕೆಳಕಂಡಂತೆ ಒಟ್ಟು 12 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ:

| ಕ್ರ.ಸಂ | ಹುದ್ದೆಯ ಪದನಾಮ | ಮಂಜೂರಾದ ಹುದ್ದೆಗಳ ಸಂಖ್ಯೆ | |
|---|---|---|---|
| | | ಧಾರವಾಡ | ಗುಲ್ಬರ್ಗಾ |
| 1 | ಶಿಷ್ಠಾಚಾರ ಅಧಿಕಾರಿ | 01 | 01 |
| 2 | ಬೆರಳಚ್ಚುಗಾರರು | 01 | 01 |
| 3 | ದ್ವಿತೀಯ ದರ್ಜೆ ಸಹಾಯಕರು | 02 | 02 |
| 4 | ಅಟೆಂಡರ್ | 01 | 01 |
| 5 | ಪ್ಯೂನ್ | 01 | 01 |
| | **ಒಟ್ಟು** | **06** | **06** |

ಸರ್ಕಾರದ ಆದೇಶ ಸಂಖ್ಯೆ:ಲಾ 137 ಎಲ್‌ಏಸಿ 2005 ದಿನಾಂಕ:25.3.2008 ರಲ್ಲಿ ಸೃಜಿಸಲಾಗಿರುವ 19 ಅತಿಥಿ ಸತ್ಕಾರ ಅಧಿಕಾರಿಗಳ ಹುದ್ದೆಗಳನ್ನು ರದ್ದುಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 766 ವೆಚ್ಚ–7/2008 ದಿನಾಂಕ:5.9.2008ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1457

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಕಾರಾಗೃಹಗಳ ಆಧುನೀಕರಣ ಹಂತ–II ಕಾರಾಗೃಹಗಳಲ್ಲಿ ವಾರ್ಡರ್ ಮತ್ತು ಜೈಲರ್ ಹುದ್ದೆಗಳನ್ನು ರಿಕ್ತ ಸ್ಥಾನಗಳಲ್ಲಿ ಭರ್ತಿ ಮಾಡಲು ಹಾಗೂ ಹೊಸ ಹುದ್ದೆಗಳನ್ನು ಸೃಜಿಸಲು ಮತ್ತು ತುಂಬಲು ಕೋರಿರುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಪತ್ರ ಸಂಖ್ಯೆ:ಹೆಚ್‌ಡಿ 29 ಪಿಆರ್‌ಇ 2006, ದಿನಾಂಕ:20.3.2008.
2 ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಇಎಸ್ ಟಿ4/ಸಿಆರ್–13/2008, ದಿನಾಂಕ:29.4.2008.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಹಾಲಿ ಖಾಲಿ ಇರುವ ಗ್ರೂಪ್ "ಸಿ" ವೃಂದದ ಹುದ್ದೆಗಳಾದ 68 ವಾರ್ಡರ್ ಹುದ್ದೆಗಳನ್ನು ಮತ್ತು 11 ಜೈಲರ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ನಿಯಮಾನುಸಾರ ಭರ್ತಿಮಾಡಿಕೊಳ್ಳಲು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರಿಗೆ ಅನುಮತಿಯನ್ನು ನೀಡಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರು, ದಿನಾಂಕ:25.4.2008ರಂದು ನವದೆಹಲಿಯಲ್ಲಿ ಕಾರಾಗೃಹಗಳ ಸುಧಾರಣೆಗಳು ಮತ್ತು ಸುಧಾರಿತ ಆಡಳಿತವನ್ನು ಕುರಿತಾಗಿ ರಾಷ್ಟ್ರೀಯ ನೀತಿಯ ಬಗ್ಗೆ ಸಚಿವರುಗಳು, ಕಾರಾಗೃಹಗಳ ಕಾರ್ಯದರ್ಶಿಗಳು, ನಿರ್ದೇಶಕರುಗಳು ಹಾಗೂ ಕಾರಾಗೃಹಗಳ ಮಹಾನಿರ್ದೇಶಕರನ್ನು ಒಳಗೊಂಡ ರಾಷ್ಟ್ರೀಯ ಸಮ್ಮೇಳನವನ್ನು ಕೇಂದ್ರ ಸರ್ಕಾರದ ಮಾನ್ಯ ಗೃಹ ಸಚಿವರು ಉದ್ಘಾಟಿಸಿರುತ್ತಾರೆ. ಈ ಸಮ್ಮೇಳನದಲ್ಲಿ ರಾಜ್ಯ ಸರ್ಕಾರದ ಪರವಾಗಿ ಸರ್ಕಾರದ ಕಾರ್ಯದರ್ಶಿಗಳು (ಪಿಸಿಎಎಸ್), ಒಳಾಡಳಿತ ಇಲಾಖೆ ಮತ್ತು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು ಭಾಗವಹಿಸಿದ್ದರು. ಈ ಸಮ್ಮೇಳನದಲ್ಲಿ ರಾಷ್ಟ್ರ ಮಟ್ಟದ ಸಮಾಲೋಚನೆಗಳ ಪ್ರಮುಖ ಲಕ್ಷ್ಯಗಳನ್ನು ಹಾಗೂ ಕಾರಾಗೃಹಗಳ ಆಧುನೀಕರಣ ಯೋಜನೆಯ ಒಂದನೇ ಹಂತದ ಅಡಿಯಲ್ಲಿ ವಿವಿಧ ರಾಜ್ಯಗಳ ಕಾರ್ಯನಿರ್ವಹಣೆಗಾಗಿ 2002–03ನೇ ಸಾಲಿನಿಂದ ಆರಂಭಿಸಿ 5 ವರ್ಷಗಳವರೆಗೆ ಕೇಂದ್ರ ಸರ್ಕಾರವು ರೂ. 1800.00 ಕೋಟಿ ಹಣವನ್ನು 75:25ರಷ್ಟು ಪಾಲುದಾರಿಕೆ ಆಧಾರದ ಮೇಲೆ ಹಂಚಿಕೆ ಮಾಡಲಾದ ಅನುದಾನದ ಬಳಕೆಯ ಬಗ್ಗೆ ಪರಿಶೀಲಿಸಲಾಯಿತು.

ಕರ್ನಾಟಕ ರಾಜ್ಯದ ಕಾರಾಗೃಹಗಳ ಇಲಾಖೆಗೆ ಭಾರತ ಸರ್ಕಾರದಿಂದ ರಾಜ್ಯದ ವಂತಿಗೆ ಹಣ ರೂ. 13.50 ಕೋಟಿಯೂ ಸೇರಿದಂತೆ ರೂ. 40.40 ಕೋಟಿಗಳಷ್ಟು ಹಂಚಿಕೆ ಮಾಡಲ್ಪಟ್ಟಿದ್ದು, ಒಟ್ಟಾರೆ ರೂ. 53.90 ಕೋಟಿಗಳನ್ನು ಕೊಪ್ಪಳ, ಉಡುಪಿ, ಮಡಿಕೇರಿ, ಸಕಲೇಶಪುರ ಮತ್ತು ಮಂಗಳೂರುಗಳಲ್ಲಿ ಅಂತಿಮ ಹಂತದಲ್ಲಿ ಕಾರಾಗೃಹ ಕಟ್ಟಡಗಳ ನಿರ್ಮಾಣಕ್ಕಾಗಿ ಪೂರ್ಣವಾಗಿ ಉಪಯೋಗಿಸಿಕೊಳ್ಳಲಾಗಿದೆ ಎಂದು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು ತಿಳಿಸಿರುತ್ತಾರೆ.

ಎರಡನೇ ಹಂತದ ಕಾರಾಗೃಹಗಳ ಆಧುನೀಕರಣ ಕಾರ್ಯವನ್ನು ಒಟ್ಟು ಮೊತ್ತ ರೂ. 3125.00 ಕೋಟಿಗಳೊಂದಿಗೆ 2008–09ನೇ ವಾರ್ಷಿಕ ಸಾಲಿನಿಂದ ಕಾರ್ಯಾರಂಭ ಮಾಡುವಾಗ, ಭಾರತ ಸರ್ಕಾರವು ಎರಡನೇ ಹಂತದ ಅಡಿಯಲ್ಲಿ ರಾಜ್ಯದ ವಿಸ್ತಾರದ ಅರ್ಹತೆಗಾಗಿ ಕೆಲವಾರು ಷರತ್ತುಗಳನ್ನು ವಿಧಿಸಿರುತ್ತದೆ. ಹೀಗೆ ವಿಧಿಸಲ್ಪಟ್ಟ ಷರತ್ತುಗಳಲ್ಲಿ ರಾಜ್ಯ ಸರ್ಕಾರವು ಅಗತ್ಯವಾದ ಕಾರಾಗೃಹಗಳನ್ನು ನಿರ್ಮಿಸಿರಬೇಕು ಹಾಗೂ ಸುಧಾರಿತ ಆಡಳಿತ ನಿರ್ವಹಣೆಯ ಅಗತ್ಯ ಸಿಬ್ಬಂದಿಗಳನ್ನು ಸ್ಥಾನಗಳನ್ನು ಸೃಜಿಸಿರಬೇಕು. ಒಂದನೇ ಹಂತದ ಅಡಿಯಲ್ಲಿ ನಿರ್ಮಿಸಿರುವ ಹೊಸ ಕಾರಾಗೃಹಗಳಿಗೆ ಮತ್ತು ಬ್ಯಾರಾಕ್ಕುಗಳಿಗೆ ನೇಮಕಾತಿ ಹಾಗೂ ತರಬೇತಿಯ ಕಾರ್ಯಾರಂಭ ಮಾಡಿರಬೇಕೆನ್ನುವುದು ಒಂದಾಗಿರುತ್ತದೆ ಎಂದು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರು ತಿಳಿಸಿರುತ್ತಾರೆ.

ಈಗಾಗಲೇ ಒಂದನೇ ಹಂತದ ಅಡಿಯಲ್ಲಿ ಕಾರಾಗೃಹಗಳ ಆಧುನೀಕರಣದ ಅನುದಾನವನ್ನು ಪಡೆದುಕೊಂಡು, ಸಕಲೇಶಪುರ, ಹಾವೇರಿ ಮತ್ತು ಚಿಂತಾಮಣಿಯಲ್ಲಿ ಕಾರಾಗೃಹ ಕಟ್ಟಡಗಳ ನಿರ್ಮಾಣವನ್ನು ಪೂರ್ಣಗೊಳಿಸಲಾಗಿದೆ. ಆದರೆ

ರಾಮನಗರ, ತುಮಕೂರು, ಚಿತ್ರದುರ್ಗ, ಬಾಗಲಕೋಟೆ, ಚಾಮರಾಜನಗರ ಮತ್ತು ಜಮಖಂಡಿಯಲ್ಲಿ ನೂತನ ಕಾರಾಗೃಹ ಕಟ್ಟಡಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡಿದ್ದು, ಹೊಸ ಹುದ್ದೆಗಳ ಸೃಜನೆಯಾಗದೆ ಅವುಗಳ ಕಾರ್ಯಾರಂಭಕ್ಕೆ ಅಡೆತಡೆ ಮತ್ತು ಸಮಸ್ಯೆಗಳು ಉಂಟಾಗಿದೆ ಎಂದು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು ಪ್ರಸ್ತಾಪಿಸಿರುತ್ತಾರೆ. ಪ್ರಸ್ತುತ ಸಂದರ್ಭದ ಅಗತ್ಯಕ್ಕಾಗಿ ಕಾರಾಗೃಹಗಳಲ್ಲಿ ಖಾಲಿ ಇರುವ ಈ ಕೆಳಕಂಡಂತೆ ತೋರಿಸಲಾಗಿರುವ ಅಂಕಿಅಂಶಗಳಿಗೆ ಅನುಗುಣವಾಗಿ ಈಗಾಗಲೇ ಇಲಾಖೆಯ ರಿಕ್ತ ಸ್ಥಾನಗಳ ಹುದ್ದೆಗಳನ್ನು ಭರ್ತಿಮಾಡಿಕೊಳ್ಳಲು ಮತ್ತು ಹೊಸ ಹುದ್ದೆಗಳನ್ನು ಸೃಜಿಸಲು ಹಾಗೂ ತುಂಬಲು ಸರ್ಕಾರವು ಶೀಘ್ರ ಮಂಜೂರಾತಿಯನ್ನು ನೀಡುವಂತೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರವರು ಕೋರಿರುತ್ತಾರೆ.

| ಕ್ರ.ಸಂ | ವಿವರ | ವಾರ್ಡರ್ | ಜೈಲರ್ |
|---|---|---|---|
| 1 | ಹಾಲಿ ಖಾಲಿ ಇರುವ ಹುದ್ದೆಗಳು | 180 | 14 |
| 2 | ಹೊಸ ಕಾರಾಗೃಹಗಳಿಗೆ ಅಗತ್ಯವಾಗಿರುವ ಸಿಬ್ಬಂದಿಗಳು | 146 | 08 |
| 3 | ಉನ್ನತ ದರ್ಜೆಗೇರಿಸಲಾದ ಕಾರಾಗೃಹಗಳಿಗೆ ಅಗತ್ಯವಾದ ಸಿಬ್ಬಂದಿಗಳು | 362 | 06 |
| | **ಒಟ್ಟು** | **688** | **28** |

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷರವರು ಈ ಮೇಲ್ಕಂಡಂತೆ ಕೋರಿರುವ ಪ್ರಸ್ತಾವನೆಗೆ ಈಗಾಗಲೇ ಸರ್ಕಾರವು ಮೇಲೆ(1)ರಲ್ಲಿ ಓದಲಾದ ಪತ್ರದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಹಾಲಿ ಖಾಲಿ ಇರುವ ಗ್ರೂಪ್–ಸಿ ವೃಂದದ 180 ವಾರ್ಡರ್ ಹುದ್ದೆಗಳಲ್ಲಿ 68 ವಾರ್ಡರ್ ಹುದ್ದೆಗಳಿಗೂ ಮತ್ತು 14 ಜೈಲರ್ ಹುದ್ದೆಗಳಲ್ಲಿ 11 ಜೈಲರ್ ಹುದ್ದೆಗಳಿಗೂ ನೇರ ನೇಮಕಾತಿ ಮೂಲಕ ನಿಯಮಾನುಸಾರ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿದ್ದರಿಂದ ಅವುಗಳಲ್ಲಿ ಬಾಕಿ ಉಳಿದ 112 ವಾರ್ಡರ್ ಹುದ್ದೆಗಳಿಗೆ ಮತ್ತು 3 ಜೈಲರ್ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಬೇಕಾಗಿರುತ್ತದೆ. ಇದಲ್ಲದೆ ಹೊಸ ಕಾರಾಗೃಹಗಳಿಗೆ ಅಗತ್ಯವಾಗಿರುವ ಸಿಬ್ಬಂದಿಗಳಲ್ಲಿ 146 ವಾರ್ಡರ್ ಹುದ್ದೆಗಳನ್ನು ಹಾಗೂ 08 ಜೈಲರ್ ಹುದ್ದೆಗಳನ್ನು ಸೃಜಿಸಲು ಮತ್ತು ತುಂಬಲು ಮಂಜೂರಾತಿ ನೀಡಬೇಕಾಗಿರುತ್ತದೆ. ಹಾಗೂ ಉನ್ನತ ದರ್ಜೆಗೇರಿಸಲಾದ ಕಾರಾಗೃಹಗಳಿಗೆ ಅಗತ್ಯವಾಗಿ ಬೇಕಾಗಿರುವ ಸಿಬ್ಬಂದಿಗಳಲ್ಲಿ 362 ವಾರ್ಡರ್ ಹುದ್ದೆಗಳನ್ನು ಮತ್ತು 6 ಜೈಲರ್ ಹುದ್ದೆಗಳನ್ನು ಸೃಜಿಸಲು ಮತ್ತು ತುಂಬಲು ಮಂಜೂರಾತಿ ನೀಡಬೇಕಾಗಿರುತ್ತದೆ.

ಈ ಹಿನ್ನಲೆಯಲ್ಲಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 36 ಪಿಆರ್‌ಇ 2007, ಬೆಂಗಳೂರು, ದಿನಾಂಕ:24ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕಾರಾಗೃಹಗಳ ಇಲಾಖೆಯಲ್ಲಿ ಹಾಲಿ ಖಾಲಿ ಇರುವ ಗ್ರೂಪ್ 'ಸಿ' ವೃಂದದ ಹುದ್ದೆಗಳಾದ 3 ಜೈಲರ್ (ವೇತನ ಶ್ರೇಣಿ ರೂ. 8,825–16,000) ಹುದ್ದೆಗಳನ್ನು ಮತ್ತು 112 ವಾರ್ಡರ್ (ವೇತನ ಶ್ರೇಣಿ ರೂ. 5,800–10,500) ಹುದ್ದೆಗಳನ್ನು ನಿಯಮಾನುಸಾರ ನೇರ ನೇಮಕಾತಿಯಿಂದ ಭರ್ತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಮುಂದುವರಿದು, ಈ ಕೆಳಗೆ ಸೂಚಿಸಿದ ಹೊಸ ಕಾರಾಗೃಹಗಳಿಗೆ ಹಾಗೂ ಉನ್ನತ ದರ್ಜೆಗೇರಿಸಲಾದ ಕಾರಾಗೃಹಗಳಿಗೆ ಒಟ್ಟು 14 ಹೊಸ ಜೈಲರ್ (ವೇತನ ಶ್ರೇಣಿ ರೂ. 8,825–16,000) ಹುದ್ದೆಗಳು ಹಾಗೂ 162 ಹೊಸ ವಾರ್ಡರ್ (ವೇತನ ಶ್ರೇಣಿ ರೂ. 5,800–10,500) ಹುದ್ದೆಗಳನ್ನು ಸೃಜಿಸಲು ಮತ್ತು ಇವುಗಳನ್ನು ನಿಯಮಾನುಸಾರ ನೇರ ನೇಮಕಾತಿಯಿಂದ ಭರ್ತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| ಕ್ರ.ಸಂ | ಸ್ಥಳ | ಹಾಲಿ ಇರುವ ಹುದ್ದೆಗಳ ಸಂಖ್ಯೆ | ಹೊಸದಾಗಿ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1 | ಜಿಲ್ಲಾ ಕಾರಾಗೃಹ, ಮಡಿಕೇರಿ | 14 | 11 |
| 2 | ಜಿಲ್ಲಾ ಕಾರಾಗೃಹ, ಬಾಗಕೋಟೆ | 16 | 09 |
| 3 | ಜಿಲ್ಲಾ ಕಾರಾಗೃಹ ಉಡುಪಿ | 0 | 25 |
| 4 | ಜಿಲ್ಲಾ ಕಾರಾಗೃಹ, ಚಾಮರಾಜನಗರ | 6 | 19 |
| 5 | ಜಿಲ್ಲಾ ಕಾರಾಗೃಹ, ರಾಮನಗರ | 6 | 19 |

| 6 | ಜಿಲ್ಲಾ ಕಾರಾಗೃಹ, ಚಿಕ್ಕಬಳ್ಳಾಪುರ | 6 | 19 |
|---|---|---|---|
| 7 | ಜಿಲ್ಲಾ ಕಾರಾಗೃಹ, ಹಾವೇರಿ | 0 | 25 |
| 8 | ಜಿಲ್ಲಾ ಕಾರಾಗೃಹ, ಕೊಪ್ಪಳ | 0 | 25 |
| 9 | ತಾಲ್ಲೂಕು ಉಪ ಕಾರಾಗೃಹ, ಚಿಂತಾಮಣಿ | 0 | 05 |
| 10 | ತಾಲ್ಲೂಕು ಉಪ ಕಾರಾಗೃಹ, ಸಕಲೇಶಪುರ | 0 | 05 |
| | **ಒಟ್ಟು** | | **162** |

ಪ್ರತಿ ಹೊಸ ಅಥವಾ ಉನ್ನತ ದರ್ಜೆಗೇರಿಸಲಾದ ಜಿಲ್ಲಾ ಕಾರಾಗೃಹಗಳಲ್ಲಿ ಕನಿಷ್ಠ 25 ವಾರ್ಡರ್ ಹುದ್ದೆಗಳ ಸಂಖ್ಯಾಬಲವನ್ನು ಹೊಂದಿರುವಂತೆಯೂ ಹಾಗೂ ತಾಲ್ಲೂಕಿನ ಉಪ ಕಾರಾಗೃಹಗಳಲ್ಲಿ ಕನಿಷ್ಠ 5 ವಾರ್ಡರ್ ಹುದ್ದೆಗಳ ಸಂಖ್ಯಾಬಲವನ್ನು ಹೊಂದಿರುವಂತೆಯೂ ಖಚಿತಪಡಿಸಿಕೊಳ್ಳುವುದು ಒಟ್ಟು ಕಾರಾಗೃಹಗಳನ್ನು ಅವಲಂಭಿಸಿ, ಕಾರ್ಯ ನಿರ್ವಹಣಾ ಸಿಬ್ಬಂದಿಗಳ ಸರಾಸರಿ ಸಂಖ್ಯಾಬಲವು ಬರುವಂತೆ ವಾಸ್ತವ ನೇಮಕಾತಿಯನ್ನು ಮಾಡಿಕೊಳ್ಳುವುದು.

ಹೊಸ ವಾರ್ಡರ್ ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳುವಾಗ ಸರಾಸರಿ 10–12 ಖೈದಿಗಳಿಗೆ ಒಬ್ಬ ವಾರ್ಡರ್ ಇರುವ ರೀತಿಯಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯಾಬಲವನ್ನು ಆಧರಿಸಿ ನೇಮಕ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಒಳಾಡಳಿತ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ:ಒಸಾಇ 27875 ಆಂಆಸ 2008 ದಿನಾಂಕ:28.5.2008ರಲ್ಲಿ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಎಫ್‌ಡಿ 531 ವೆಚ್ಚ–6/2008, ದಿನಾಂಕ:17.9.2008ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1383

**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಸೆರೆಮನೆ ಮತ್ತು ಸಿನಿಮಾ)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಮಂಗಳೂರು ತಾಲ್ಲೂಕಿನ ಮಂಗಳಾಗಂಗೋತ್ರಿ–ದೋಟ ಗ್ರಾಮೀಣ ರಸ್ತೆ ಮತ್ತು ಮಂಗಳಾ ಗಂಗೋತ್ರಿ– ಕೋಣಾಜೆ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರ ಪತ್ರಸಂಖ್ಯೆ:ಮಇಂ/ಸಂಕದ.ರಶಾ/ಸಇ02/2008–09, ದಿನಾಂಕ:16.9.2008

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರು ಮಂಗಳೂರು ತಾಲ್ಲೂಕಿನ ಮಂಗಳಾಗಂಗೋತ್ರಿ–ದೋಟ ಮತ್ತು ಮಂಗಳಾಗಂಗೋತ್ರಿ–ಕೋಣಾಜೆ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ಮಂಗಳಾಗಂಗೋತ್ರಿ–ದೋಟ ರಸ್ತೆ | 0.16 |
| 2 | ಮಂಗಳಾಗಂಗೋತ್ರಿ–ಕೋಣಾಜೆ ರಸ್ತೆ | 0.90 |
| | **ಒಟ್ಟು** | **1.06** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ) ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 522 ಸಿಆರ್‌ಎಂ 2007, ಬೆಂಗಳೂರು, ದಿನಾಂಕ:15ನೇ ಅಕ್ಟೋಬರ್ 2008**

ಮಂಗಳೂರು ತಾಲ್ಲೂಕಿನ ಮಂಗಳಾಗಂಗೋತ್ರಿ–ದೋಟ ಮತ್ತು ಮಂಗಳಾಗಂಗೋತ್ರಿ–ಕೋಣಾಜೆ ಒಟ್ಟು 1.06 ಕಿ.ಮೀ ಉದ್ದದ ಈ ಕೆಳಕಂಡ 2 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ಮಂಗಳಾಗಂಗೋತ್ರಿ–ದೋಟ ರಸ್ತೆ | 0.16 |

| | | |
|---|---|---|
| 2 | ಮಂಗಳಗಂಗೋತ್ರಿ–ಕೋಣಾಜೆ ರಸ್ತೆ | 0.90 |
| | **ಒಟ್ಟು** | **1.06** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1433

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,(ಸಂಪರ್ಕ)

**ವಿಷಯ:** ಬೀದರ್ ಜಿಲ್ಲೆ ಬೀದರ್ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರ ಪತ್ರಸಂಖ್ಯೆ:ಸಿಬಿಎಸ್:ಹೈಕ್ಯಸೆ:ಕ.ಸಂ.7/12/ಶಾಸಮ:ಗ್ರಾರಮೇ:ಬೀದರ್:08–09, ದಿನಾಂಕ:19.8.2008

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರು ಬೀದರ್ ಜಿಲ್ಲೆ ಬೀದರ್ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ಬಸಂತಪೂರದಿಂದ ಚಾಂಬೋಳ ರಸ್ತೆ (ಫತ್ತೇಪೂರ–ಕನ್ನಳ್ಳಿ–ದದ್ದಾಪೂರ–ಎನ್‌ಎಸ್‌ಎಸ್‌ಕೆ–ಹಿಪ್ಪಳಗಾಂವ ಮಾರ್ಗ) | 17.50 |
| 2 | ಜನವಾಡದಿಂದ ಚಾಂಬೋಳ–ನವಲಾಸಪುರ–ಕಂಗಟಿ ವರೆಗಿನ ರಸ್ತೆ | 10.20 |
| 3 | ಹಬ್ಸಿಕೋಟ್ ಅತಿಥಿ ಗೃಹಕ್ಕೆ ಕೂಡು ರಸ್ತೆ | 2.10 |
| | **ಒಟ್ಟು** | **29.80** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ) ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 540 ಸಿಆರ್‌ಎಂ 2008, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್ 2008**

ಬೀದರ್ ಜಿಲ್ಲೆ ಬೀದರ್ ತಾಲ್ಲೂಕಿನ ಒಟ್ಟು 29.80 ಕಿಮೀ ಉದ್ದದ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀಗಳಲ್ಲಿ |
|---|---|---|
| 1 | ಬಸಂತಪೂರದಿಂದ ಚಾಂಬೋಳ ರಸ್ತೆ (ಫತ್ತೇಪೂರ–ಕನ್ನಳ್ಳಿ–ದದ್ದಾಪೂರ–ಎನ್‌ಎಸ್‌ಎಸ್‌ಕೆ–ಹಿಪ್ಪಳಗಾಂವ ಮಾರ್ಗ) | 17.50 |
| 2 | ಜನವಾಡದಿಂದ ಚಾಂಬೋಳ–ನವಲಾಸಪುರ–ಕಂಗಟಿ ವರೆಗಿನ ರಸ್ತೆ | 10.20 |
| 3 | ಹಬ್ಸಿಕೋಟ್ ಅತಿಥಿ ಗೃಹಕ್ಕೆ ಕೂಡು ರಸ್ತೆ | 2.10 |
| | **ಒಟ್ಟು** | **29.80** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1434

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,(ಸಂಪರ್ಕ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ವಾಕೈ 27 ರೇಉನಿ 2007, ಬೆಂಗಳೂರು, ದಿನಾಂಕ:14ನೇ ಅಕ್ಟೋಬರ್ 2008**

ದಿನಾಂಕ:26.9.2008ರ ಸರ್ಕಾರಿ ಆದೇಶ ಸಂಖ್ಯೆ :ವಾಕೈ 27 ರೇಉನಿ 2007ರ ಆದೇಶ ಭಾಗದಲ್ಲಿಯ ಅಂಶ–3ರ ಷರತ್ತುಗಳಲ್ಲಿಯ ಮೊದಲನೇ ಷರತ್ತಿನಲ್ಲಿ ಬರುವ "ಹೆಚ್ಚುವರಿ ಸಿಬ್ಬಂದಿಯನ್ನು ಗುರುತಿಸಿ ಇವರಿಗೆ" ಎಂಬುದಕ್ಕೆ ಬದಲಾಗಿ

"ಶಾಶ್ವತ ಹುದ್ದೆಗಳಲ್ಲಿನ ಹೆಚ್ಚುವರಿ ಹುದ್ದೆಗಳನ್ನು ಗುರುತಿಸಿ (permanent & regular posts) ಆ ಹುದ್ದೆಗಳಲ್ಲಿರುವವರಿಗೆ ಮಾತ್ರ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1435

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ, (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಪರಿಹಾರಾತ್ಮಕ ನೆಡುತೋಪುಗಳ ದರ ಪರಿಷ್ಕರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಅಪಜೀ 44 ಎಫ್ ಎಪಿ 96, ದಿನಾಂಕ:3.2.1997
2. ಸರ್ಕಾರಿ ಆದೇಶ ಸಂಖ್ಯೆ:ಅಪಜೀ 1566 ಎಫ್‌ಎಪಿ 2002, ದಿನಾಂಕ:28.11.2002
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ:ಎ5 (6) ಜಿಎಫ್ ಎಲ್ /ಸಿಆರ್/178/95–96, ದಿನಾಂಕ:2.6.2008 ಮತ್ತು 19.8.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:3.2.1997ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 30.000–00 ಗಳನ್ನು ನಿಗಧಿಪಡಿಸಿ, ದಿನಾಂಕ:1.4.1996 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ.:28.11.2002ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ,. 54,200–00 ಗಳನ್ನು ನಿಗಧಿಪಡಿಸಿ, ದಿನಾಂಕ:1.4.2001ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:2.6.2008 ಮತ್ತು 19.8.2008ರ ಪತ್ರಗಳಲ್ಲಿ ಅರಣ್ಯೀಕರಣದ ಕಾಮಗಾರಿಗಳ ಮಂಜೂರಾದ ಅನುಸೂಚಿತ ದರಗಳು (SSR) ಗಣನೀಯವಾಗಿ ಹೆಚ್ಚಳವಾಗಿದ್ದು, 2008–09ನೇ ಸಾಲಿನ ಡಾಟಾಶೀಟ್‌ಗಳನ್ನು ಆಧಾರವಾಗಿಟ್ಟುಕೊಂಡು ಸಸಿಗಳನ್ನು ಬೆಳೆಸುವ ಉತ್ಪಾದನಾ ವೆಚ್ಚವನ್ನು ನಿರ್ಧರಿಸಿರುವ ಮೇರೆಗೆ ಪರಿಹಾರಾತ್ಮಕ ನೆಡುತೋಪುಗಳ ದರವನ್ನು ರೂ. 54.200–00 ರಿಂದ ರೂ. 84,000–00 ಗಳಿಗೆ ಪರಿಷ್ಕರಿಸಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 54.200–00ಗಳಿಂದ ರೂ. 84.000–00 ಗಳಿಗೆ ಹೆಚ್ಚಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಅಪಜೀ 102 ಎಫ್‌ಎಪಿ 2008, ಬೆಂಗಳೂರು, ದಿನಾಂಕ:15ನೇ ಅಕ್ಟೋಬರ್ 2008**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ದಿನಾಂಕ:1.10.2008 ರಿಂದ ಜಾರಿಗೆ ಬರುವಂತೆ ರೂ. 54,200–00 ಗಳಿಂದ ರೂ. 84,000–00 ಗಳಿಗೆ ಹೆಚ್ಚಿಸಲಾಗಿದ್ದು ಉಪಯೋಗಿತ ಸಂಸ್ಥೆಗಳಿಂದ ವಸೂಲಿ ಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1436

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬಳ್ಳಾರಿ ಪಟ್ಟಣದಲ್ಲಿ ಬೈಪಾಸ್ ರಸ್ತೆ ಅಭಿವೃದ್ಧಿಪಡಿಸಲು ಯೋಜನಾ ಸಂಚಾಲನಾ ಸಮಿತಿ (Project Monitoring Committee) ಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆಯು ಕರ್ನಾಟಕದ ಪ್ರಮುಖ ಗಣಿ ಚಟುವಟಿಕೆ ಕೇಂದ್ರವಾಗಿದ್ದು, ಕಬ್ಬಿಣದ ಅದಿರ ಹಾಗೂ ಮ್ಯಾಗಂನೀಸ್ ನಿಕ್ಷೇಪಗಳ ಸಿರಿಯನ್ನು ಹೊಂದಿದೆ. ಬಳ್ಳಾರಿ–ಹೊಸಪೇಟೆ ವಲಯದಲ್ಲಿ ಕಬ್ಬಿಣದ ಅದಿರಿನ ಗಣಿಗಾರಿಕೆಯ ಪ್ರಮುಖವಾದ ರಸ್ತೆಯ ಭಾಗವೊಂದು ಬಳ್ಳಾರಿ ನಗರದ ಮೂಲಕ ಹಾದು ಹೋಗುತ್ತದೆ. ನಗರದೊಳಗೆ ಹಾದು ಹೋಗುವ ಮ್ಯಾಂಗನೀಸ್ ಅದಿರು ತುಂಬಿದ ಬೃಹತ್ ಸಂಖ್ಯೆಯ ಲಾರಿಗಳ ಓಡಾಟದಿಂದ ಬಳ್ಳಾರಿ ವಾಸಿಗಳು ಕಲುಶಿತ ಗಾಳಿಯಿಂದ

ಉಂಟಾಗುವ ಕೆಟ್ಟ ಪರಿಣಾಮಗಳನ್ನು ಎದುರಿಸುತ್ತಿದ್ದಾರೆ ಹಾಗೂ ನಗರದೊಳಗೆ ವಿನಾ ಕಾರಣ ಸಂಚಾರಿ ದಟ್ಟಣೆಗೆ ಎಡೆಮಾಡಿ ಕೊಟ್ಟಿದೆ.

ಬಳ್ಳಾರಿ ನಗರದಲ್ಲಿ ದಟ್ಟಣೆಯ ವಾಹನ ಸಂಚಾರವನ್ನು ಕಡಿಮೆ ಮಾಡಲು ಪಟ್ಟಣಕ್ಕೆ ಬೈಪಾಸ್ ರಸ್ತೆಯನ್ನು ಅಭಿವೃದ್ಧಿಪಡಿಸಲು ಸಾಧ್ಯವಾಗಬಹುದಾದ ಪರ್ಯಾಯ ಸಲಹೆಗಳನ್ನು ಅಧ್ಯಯನ ಮಾಡಲು ಮತ್ತು ಸಾರ್ವಜನಿಕ ಖಸಗಿ ಸಹಭಾಗಿತ್ವದಡಿಯಲ್ಲಿ (PPP) ಯೋಜನೆಯೊಂದನ್ನು ಅಭಿವೃದ್ಧಿಪಡಿಸಲು ನಿರ್ಧರಿಸಲಾಗಿದೆ.

ಈ ಯೋಜನೆಯನ್ನು BOT ಆಧಾರದ ಸಾರ್ವಜನಿಕ ಖಾಸಗಿ–ಸಹಭಾಗಿತ್ವದ ಮುಖೇನ ಯೋಜನೆಯನ್ನು ಅನುಷ್ಠಾನಗೊಳಿಸಲು ಸೂಕ್ತ ಬಿಡ್ಡುದಾರರ ಆಯ್ಕೆಗಾಗಿ ಮತ್ತು ಯೋಜನೆಯ ಅಭಿವೃದ್ಧಿ ಪ್ರಕ್ರಿಯೆ ಮೇಲ್ವಿಚಾರಣೆಗಾಗಿ ಒಂದು ಯೋಜನಾ ಸಂಚಾಲನ ಸಮಿತಿಯನ್ನು (Project Monitoring Committee) ರಚಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 33 ನಮುಯೋ 2007, ಬೆಂಗಳೂರು, ದಿನಾಂಕ:10ನೇ ಅಕ್ಟೋಬರ್ 2008**

ಬಳ್ಳಾರಿ ಪಟ್ಟಣದಲ್ಲಿ ಬೈಪಾಸ್ ರಸ್ತೆಯನ್ನು BOT ಆಧಾರದ ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಮುಖೇನ ಯೋಜನೆಯನ್ನು ಅನುಷ್ಠಾನಗೊಳಿಸಲು ಸೂಕ್ತ ಬಿಡ್ಡುದಾರರ ಆಯ್ಕೆಗಾಗಿ ಮತ್ತು ಯೋಜನೆಯ ಅಭಿವೃದ್ದಿ ಪ್ರಕ್ರಿಯೆ ಮೇಲ್ವಿಚಾರಣೆಗಾಗಿ ಈ ಕೆಳಕಂಡವರನ್ನು ಹೊಂದಿದಂತೆ.

ಯೋಜನಾ ಸಂಚಾಲನ ಸಮಿತಿಯನ್ನು (Project Monitoring Committee) ರಚಿಸಲಾಗಿದೆ:

| | | |
|---|---|---|
| i | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ | ಅಧ್ಯಕ್ಷರು |
| ii | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಸದಸ್ಯರು |
| iii | ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| iv | ಸರ್ಕಾರದ ಕಾರ್ಯದರ್ಶಿ, ಅರಣ್ಯ, ಜೀವಿ ಪರಿಶಾಸ್ತ್ರ ಮತ್ತು ಪರಿಸರ ಇಲಾಖೆ | ಸದಸ್ಯರು |
| v | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | ಸದಸ್ಯರು |
| vi | ವ್ಯವಸ್ಥಾಪಕ ನಿರ್ದೇಶಕರು, ಮೂಲಸೌಲಭ್ಯ ಅಭಿವೃದ್ಧಿ ನಿಗಮ (ಕರ್ನಾಟಕ)(ಐಡೆಕ್) ಲಿಮಿಟೆಡ್ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1439

**ಟಿ.ಬಿ. ರೇಣುಕಾ ಪ್ರಸಾದ್**
ಸರ್ಕಾರದ ಉಪ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ:** ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್, ಹಿಂದಿನ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರು ಕೃಷಿ ಉತ್ಪನ್ನ ಮಾರುಕಟ್ಟೆ ಸಮುತಿ, ಬಾಗಲಕೋಟೆ ಇವರ ವಿರುದ್ಧ ದುರ್ನಡತೆ ಕುರಿತು ಲೋಕಾಯುಕ್ತ ತನಿಖಾ ವರದಿ ಕ್ರಮದ ಬಗ್ಗೆ.

**ಓದಲಾಗಿದೆ:**
1. ಅಪರ ನಿಬಂಧಕರು, ವಿಚಾರಣೆ (5), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: Compt/UPLOK/BGM-84/2003/ARE-5 (UPLOK/BGM-263/2003 & BGM-246)/2005 ದಿನಾಂಕ:5.4.2007.
2. ಸರ್ಕಾರದ ತಿಳಿವಳಿಕೆ ನೋಟೀಸು ಸಂಖ್ಯೆ:ಸಇ 94 ಮಾಇಸೇ 2007 ದಿನಾಂಕ:27.9.2007.
3. ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್, ಹಿಂದಿನ ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಾಗಲಕೋಟೆ ಇವರ ಲಿಖಿತ ಹೇಳಿಕೆ ದಿ:23.10.07
4. ನಿರ್ದೇಶಕರು, ಕೃಷಿ, ಮಾರುಕಟ್ಟೆ ಇಲಾಖೆ ಇವರ ಪತ್ರ ಸಂಖ್ಯೆ:ಕೃಮಾಇ:90 ಚುನಾವಣೆ:2007 ದಿನಾಂಕ:3.4.08. 10/9/08 ಮತ್ತು 12.12.08.

**ಪ್ರಸ್ತಾವನೆ:**

ಶ್ರೀ ಸಿದ್ದರಾಮಪ್ಪ ಲಕ್ಷ್ಮಪ್ಪ ಜಕ್ಕಣ್ಣನವರ, ಗದ್ದನಕೇರಿ, ಬಾಗಲಕೋಟೆ ಜಿಲ್ಲೆ ಇವರು ದಿನಾಂಕ:16.4.2002 ರಂದು ಕರ್ನಾಟಕ ಲೋಕಾಯುಕ್ತಕ್ಕೆ ಸಲ್ಲಿಸಿದ ದೂರಿನ ಆಧಾರದ ಮೇಲೆ ಕರ್ನಾಟಕ ಲೋಕಾಯುಕ್ತರು, ಬಾಗಲಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸೇರಿದ ಒಟ್ಟು 30 ಎಕರೆ ಜಮೀನನ್ನು ಮಾರಾಟ ಮಾಡುವಲ್ಲಿ ನಡೆದಿದೆ ಎನ್ನಲಾದ ಅಕ್ರಮದ ಬಗ್ಗೆ ತನಿಖೆ ನಡೆಸಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3)ರನ್ವಯ ಸರ್ಕಾರಕ್ಕೆ ಉಲ್ಲೇಖ (1)ರಲ್ಲಿ ಹೇಳಿರುವ ಪತ್ರದಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಶ್ರೀಮತಿ ಸುಧಾತಾಯಿ ಹಿರೇಮಣಿ, ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಹಾಗೂ ಹಿಂದಿನ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಾಗಲಕೋಟೆ ರವರು ಮತ್ತು ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್, ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಾಗಲಕೋಟೆ ಇವರೊಂದಿಗೆ ಶಾಮೀಲಾಗಿ ಕೃಷಿ ಉತ್ಪನ್ನ ಸಮಿತಿ, ಬಾಗಲಕೋಟೆ ಇದಕ್ಕೆ ಸೇರಿದ ಕೇಸನೂರು ಗ್ರಾಮದ 30 ಎಕರೆ ಜಮೀನನ್ನು ನಿಯಮಾನುಸಾರ ಟೆಂಡರ್ ಕರೆಯದೆ, ವಸ್ತು ಸ್ಥಿತಿಯನ್ನು ಮರೆಮಾಚಿ ಒಂದಕ್ಕೆ ರೂ. 50,000/– ದಂತೆ ಒಟ್ಟು 30 ಎಕರೆ ಜಮೀನನ್ನು ರೂ,

15,00,000/– ಮೊತ್ತಕ್ಕೆ ಶ್ರೀ ತಿರುಪತಿ ಬಿ. ಹಡಗಲಿಯವರಿಗೆ ಮಾರುಕಟ್ಟೆ ದರಕ್ಕಿಂತ ಕಡಿಮೆ ಮೊತ್ತಕ್ಕೆ ಮಾರಾಟ ಮಾಡಿ, ಸಮಿತಿಗೆ ಆರ್ಥಿಕ ನಷ್ಟ ಉಂಟುಮಾಡಿ, ದುರ್ನಡತೆ ಎಸಗಿದ್ದಾರೆಂದು ವರದಿಯಲ್ಲಿ ತಿಳಿಸುತ್ತಾ, ಕರ್ನಾಟಕ ಲೋಕಾಯುಕ್ತವು ಶ್ರೀಮತಿ ಸುಧಾತಾಯಿ ಹಿರೇಮಣಿ ಇವರ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸಲು ಮತ್ತು ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್ ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಾಗಲಕೋಟೆ ಇವರು ಸರ್ಕಾರಿ ನೌಕರರಲ್ಲದ ಕಾರಣ ಇವರ ದುರ್ನಡತೆಗೆ ಕರ್ನಾಟಕ ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ 1966ರಡಿ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಅದರಂತೆ ಸರ್ಕಾರವು ಶ್ರೀಮತಿ ಸುಧಾತಾಯಿ ಹಿರೇಮಣಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಸರ್ಕಾರದ ಆದೇಶ ಸಂಖ್ಯೆ: ಸಇ 94 ಮಾಇಸೇ 2007(1) ದಿನಾಂಕ:27.9.2007ರಂದು ಉಪಲೋಕಾಯುಕ್ತಕ್ಕೆ ವಹಿಸಲಾಗಿದೆ. ಈ ಇಲಾಖಾ ವಿಚಾರಣೆಯು ಉಪಲೋಕಾಯುಕ್ತದಲ್ಲಿ ಸಾಕ್ಷಿಗಳ ವಿಚಾರಣೆ ನಡೆಯುತ್ತಿದೆ.

ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್, ಇವರು ಸರ್ಕಾರಿ ನೌಕರರಲ್ಲದ ಕಾರಣ ಇವರ ವಿರುದ್ಧ ಕ್ರಮ ಕೈಗೊಳ್ಳುವ ಸಲುವಾಗಿ ಕರ್ನಾಟಕ ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ 1966ರ ಪ್ರಕರಣ 129ರನ್ವಯ ಲೋಕಾಯುಕ್ತ ವರದಿಯ ಪ್ರತಿಯನ್ನು ಸಲ್ಲಿಸಿ ಅವರ ಲಿಖಿತ ಪ್ರತಿಪಾದನಾ ಹೇಳಿಕೆಗಳನ್ನು ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ತಿಳುವಳಿಕೆ ನೋಟೀಸನ್ನು ಜಾರಿಗೊಳಿಸಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್ ಹಿಂದಿನ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಾಗಲಕೋಟೆ ರವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಲಿಖಿತ ಪ್ರತಿಪಾದನಾ ಹೇಳಿಕೆಗಳನ್ನು ಸಲ್ಲಿಸಿ, ಆರೋಪಗಳನ್ನು ಅಲ್ಲಗಳೆದಿರುತ್ತಾರೆ.

ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್ ಹಿಂದಿನ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಾಗಲಕೋಟೆ ರವರ ಲಿಖಿತ ಹೇಳಿಕೆಯ ಪ್ರತಿಯನ್ನು ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರಿಗೆ ಕಳುಹಿಸಿ ಅವರ ಅಭಿಪ್ರಾಯವನ್ನು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಪಡೆಯಲಾಗಿತ್ತು.

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರ ಮೇಲೆ ಓದಲಾದ (4)ರ ಪತ್ರಗಳಲ್ಲಿ ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್ ರವರು ನೀಡಿರುವ ಲಿಖಿತ ಉತ್ತರವನ್ನು ಪರಿಶೀಲಿಸಿ ಅವರ ವಿರುದ್ಧ ಮಾಡಿರುವ ಆರೋಪಗಳು ಸಾಬೀತಾಗಿರುವುದರಿಂದ ಕರ್ನಾಟಕ ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ 1966ರ ಪ್ರಕರಣ 129ರ ಪ್ರಕಾರ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಅವರ ಸದಸ್ಯತ್ವವನ್ನು ರದ್ದುಗೊಳಿಸಬಹುದಾಗಿದೆಯೆಂದು ಶಿಫಾರಸ್ಸು ಮಾಡಿರುತ್ತಾರೆ. ಸರ್ಕಾರವು ಈಗಾಗಲೇ ಕರ್ನಾಟಕ ಕೃಷಿ ಉತ್ಪನ್ನ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ 1966ರ ಪ್ರಕರಣ 129ರಡಿ ಕ್ರಮ ಕೈಗೊಂಡಿದ್ದು, ಅವರ ವಿರುದ್ಧದ ಆರೋಪವು ಸಾಬಿತಾಗಿರುವ ಹಿನ್ನಲೆಯಲ್ಲಿ ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್, ಹಿಂದಿನ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮುತಿ, ಬಾಗಲಕೋಟೆ ರವರನ್ನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯತ್ವದಿಂದ ವಜ ಮಾಡಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 94 ಮಾಇಸೇ 2007 ಬೆಂಗಳೂರು, ದಿನಾಂಕ:12ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ 1966ರ ಪ್ರಕರಣ 129(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಹೆಚ್. ಜಕ್ಕಣ್ಣಗೌಡರ್, ಹಿಂದಿನ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮುತಿ, ಬಾಗಲಕೋಟೆ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಬಾಗಲಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸದಸ್ಯತ್ವದಿಂದ ವಜಾ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1690

**ಸಿ.ಕೆ ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

## LABOUR SECRETARIAT

**Sub :** Launching of Rashtriya Swasthya Bima Yojana in Karnataka for providing Health cover to BPL Workers in the Un-organized Sector.

**Read :** 1 G.O. No. LD 2 LWA 2008, dated: 6.2.2008 and dated:29.3.2008

2 D.O.No. LGN/RSBY/CR-14/2007-08 dated:25.9.2008 of the Commissioner of Labour

**Preamble:**

The Government of India has formulated Rashtriya Swasthya Bima Yojana to provide helath insurance coverage to the Below Poverty, Line families The Government of Karnataka vide Government Order ref-(1), decided to implement the said scheme in a phased manner so as to cover all the 29 districts

in a period of five years from 2008-09 to 2021-13, In the year 2008-09 the Government selected Six districts namely, Belgaum, Gulbarga, Shimoga, Mysore Dakshina Kananda and Bangalore Rural.

The Labour Commissioner & Chairman, Karnataka State Rashtriya Swasthya Bima Yojana Society, Bangalore in his letter cited under ref-(2) has requested to constitute a "District Implementation Committee" at the District Level consisting the district level officers of various departments for effective implementation of the scheme.

**G.O.No. LD 2 LWA 2008, Dated: 24th November 2008**

The Government after careful examination accept the above proposal and constitute a "District Implementation Committee" with the following officers of the respective districts is constituted.

| | | |
|---|---|---|
| 1 | Deputy Commissioner | Chairman |
| 2 | Chief Executive Officer, Zilla Panchayat | Member |
| 3 | District Health and Family Welfare Officer (DHO) | Member |
| 4 | District Surgeon | Member |
| 5 | Project Director, District Urban Development Cell | Member |
| 6 | Senior Insurance Medical officer of the District ESI Hospotal/Dispensary | Member |
| 7 | District Informatic Officer, NIC | Member |
| 8 | Deputy Director of Public Instructions, Department of Education | Member |
| 9 | a) Deputy Labour Commissioner, Hassan Region, Hassan | Nodal Officer, DKMA and Member Secretary Shimoga District |
| | b) Deputy Labour Commissioner, Gulbarga Region, Gulbarga | Nodal Officer, DKMA and Member Secretary Gulbarga District. |
| | c) Deputy Labour Commissioner, Belgaum Region, Belgaum | Nodal Officer, DKMA and Member Secretary Belgaum District |
| | d) Deputy Labour Commissioner, Region-2 Bangalore- Bangalore | Nodal Officer, DKMA and Member Secretary Bzangalore District |
| | e) Assistant Labour Commissioner, Mangalore Division, Mangalore | Nodal Officer, DKMA and Member Secretary Dakshina Kannada District |
| | f) Assistant Labour Comissioner Mysore Divison, Mysore | Nodal Officer, DKMA and Member Secretary Mysore District |

The Government of Karnataka resoveld to appoint the Deputy Labour Commissioner /Assistant Labour Commissioner of the respective districts to be the Nodal Officer, District Key Management Authority (DKMA) and Member Secretary to the implementation of the Rashtriya Swasthya Bima Yojana (RSBY). The District Informatic Officer (DIO) of National Informatic Centers (NIC) shall provide all technical support to the District Key Management Authority (DKMA)

By order and in the name of the Governor of Karnataka,

**IBRAHIM GOONADKA**

Special Officer & Ex-Officio

Deputy Secretary to Government

Labour Department.

P.R. 1698

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಎಂ. ನಾಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ ನ್ಯಾಯಾಲಯ, ತರೀಕೆರೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಅಧಿಸೂಚನೆ ಸಂ:ಲಾ 225 ಪಿಪಿಇ 91, ದಿನಾಂಕ:10.6.1994.
2 ಸರ್ಕಾರದ ಪತ್ರದ ಸಂ:ಲಾ 221 ಪಿಪಿಇ 96(15) ದಿನಾಂಕ:18.11.1996.
3 ಸದರಿ ಅಧಿಕಾರಿಯವರ ಮನವಿ ದಿನಾಂಕ:15.2.2008.
4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/114/2008–09, ದಿನಾಂಕ:4.7.2008

**ಪ್ರಸ್ತಾವನೆ:**

ಶ್ರೀ ಎಸ್.ಎಂ. ನಾಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ತರೀಕೆರೆ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ:10.6.1994, ಕ್ರ.ಸಂ:19ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ:28.6.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ:1.10.1957 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ:18.11.1996ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರು ದಿನಾಂಕ:28.6.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ಸದರಿಯವರ ಜನ್ಮ ದಿನಾಂಕವನ್ನು 1.10.1957 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಆದ್ದರಿಂದ, ನಿಯಮಾನುಸಾರ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡುವಂತೆ ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು, ಶ್ರೀ ಎಸ್.ಎಂ. ನಾಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ತರೀಕೆರೆ, ಇವರು ದಿನಾಂಕ:28.6.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ:1.10.1957 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 36 ವರ್ಷ 08 ತಿಂಗಳು 27 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರಯತ್ತಾರೆ.ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 300 ಪಿಪಿಇ 2008, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್ 2008**

ಶ್ರೀ ಎಸ್.ಎಂ. ನಾಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ (ಅಧಿಸೂಚನೆ ಸಂ:ಎಫ್ ಡಿ 1 ಎಸ್ ಆರ್‌ಎ 2004, ದಿನಾಂಕ:1.11.2004ರನ್ವಯ) ಅಧಿಕ ಸೇವೆಯನ್ನು ಶ್ರೀಯುತರ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 996 ವೆಚ್ಚ–7/2008, ದಿನಾಂಕ:10.9.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1440

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗಗಳು)

**ಶಿಕ್ಷಣ ಸಚಿವಾಲಯ**

**ವಿಷಯ:** ಪೀಪಲ್ಸ್ ಪಾರ್ಕ ನಜರಾಬಾದ್, ಮೈಸೂರು ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಕಟ್ಟಡ ಕಾಮಗಾರಿಗೆ ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ ಇಡಿ:78:ಯೋಯೋಕ 2008, ದಿನಾಂಕ:4.4.2008

2 ಸರ್ಕಾರದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ನಂ–2, ಕಟ್ಟಡಗಳ ಉಪ ವಿಭಾಗ, ಮೈಸೂರು ರವರ ಪತ್ರ ಸಂಖ್ಯೆ:ಸಕಾಇಂ:ಲೋಇಕುವಿಮೈ/ಜೆ.ಇ/796/08–09 ದಿನಾಂಕ:28.8.2008.

**ಪ್ರಸ್ತಾವನೆ:**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2008–09ನೇ ಸಾಲಿಗೆ ಲೆಕ್ಕ ಶಿರ್ಷಿಕೆ 2202–02–800–1–10–059 [ಯೋಜನೆ] ರಡಿ ಕಟ್ಟಡ ರಹಿತ ಸರ್ಕಾರಿ ಪ್ರೌಢಶಾಲೆಗಳಿಗೆ ಅಗತ್ಯ ಕೊಠಡಿಗಳನ್ನು ನಿರ್ಮಿಸಲು 300.00 ಲಕ್ಷರೂ.ಗಳನ್ನು ಒದಗಿಸಲಾಗಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ನಂ–2 ಕಟ್ಟಡಗಳ ಉಪ ವಿಭಾಗ, ಮೈಸೂರು ರವರು, ಪೀಪಲ್ಸ್ ಪಾರ್ಕ ನಜರಾಬಾದ್, ಮೈಸೂರು ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿಗೆ ಕಟ್ಟಡ ನಿರ್ಮಿಸಲು ಮುಖ್ಯ ವಾಸ್ತು ಶಿಲ್ಪಿ, ಬೆಂಗಳೂರುರವರು ನೀಡಿರುವ ನೆಲ ಅಂತಸ್ತಿನ ನಕ್ಷೆಯಲ್ಲಿ ಎರಡು ತರಗತಿ ಕೊಠಡಿಗಳು, ಒಂದು ಪ್ರಯೋಗಾಲಯ ಕೊಠಡಿ, ಒಂದು ಕಛೇರಿ, ಒಂದು ಪ್ರಾಂಶುಪಾಲರ ಕೊಠಡಿ ಹಾಗೂ ಒಂದು ಸಿಬ್ಬಂದಿ ವರ್ಗಕ್ಕೆ ಕೊಠಡಿ ಹಾಗೂ ಮೊದಲನೇ ಅಂತಸ್ತಿನಲ್ಲಿ ನಾಲ್ಕು ತರಗತಿ ಕೊಠಡಿ, ಒಂದು ಪ್ರಯೋಗಾಲಯ ಕೊಠಡಿ, ಮತ್ತು ಎರಡನೇ ಅಂತಸ್ತಿನಲ್ಲಿ ಮೂರು ತರಗತಿ ಕೊಠಡಿಗಳು, ಒಂದು ಪ್ರಯೋಗಾಲಯ ಕೊಠಡಿ, ಒಂದು ಸಿಬ್ಬಂದಿ ಕೊಠಡಿ ನಿರ್ಮಿಸಲು ಅವಕಾಶ ಕಲ್ಪಿಸಲಾಗಿದ್ದು, ಈ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು 138.00 ಲಕ್ಷರೂ.ಗಳೆಂದು ಅಂದಾಜು ಮಾಡಿ, ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 219: ಯೋಸಕ 2008, ಬೆಂಗಳೂರು, ದಿನಾಂಕ:24ನೇ ಸೆಪ್ಟೆಂಬರ್ 2008**

(4) ಪೀಪಲ್ಸ್ ಪಾರ್ಕ ನಜರಾಬಾದ್, ಮೈಸೂರು ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿಗೆ ಕಟ್ಟಡ ನಿರ್ಮಿಸಲು, 2008–09ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–02–800–1–10–059 [ಯೋಜನೆ]ರಡಿ ಒದಗಿಸಲಾಗಿರುವ 300.00 ಲಕ್ಷ ರೂಪಾಯಿಗಳಲ್ಲಿ [ಮೂನ್ನೂರು ಲಕ್ಷ ರೂಪಾಯಿಗಳು ಮಾತ್ರ]. ಒಟ್ಟು ಅಂದಾಜಿನ ಶೇ. 30ರಷ್ಟು ಎಂದರೆ 30.00 ಲಕ್ಷ ರೂಪಾಯಿಗಳನ್ನು [ಮೂವತ್ತು ಲಕ್ಷ ರೂಪಾಯಿಗಳು ಮಾತ್ರ] ಮುಖ್ಯ ಕಾರ್ಯಪಾಲಕ ಅಭಿಯಂತರರು, ಲೋಕೊಪಯೋಗಿ ಇಲಾಖೆ[ಸಂಪರ್ಕ ಮತ್ತು ಕಟ್ಟಡಗಳು] ಬೆಂಗಳೂರು ರವರಿಗೆ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ. ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

**ಷರತ್ತುಗಳು:**

- ಮೇಲ್ಕಂಡ ಮೊತ್ತವನ್ನು ಅಂದಾಜು ಪಟ್ಟಿ ಮತ್ತು ನಕ್ಷೆಯನ್ನು ಲೋಕೋಪಯೋಗಿ ಇಲಾಖೆ ಯಿಂದ ಪಡೆದು ಆಡಳಿತಾತ್ಮಕ ಅನುಮೋದನೆಯನ್ನು ಸರ್ಕಾರದಿಂದ ಪಡೆದು ಬಿಡುಗಡೆ ಮಾಡತಕ್ಕದ್ದು.
- ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಡಿಯಲ್ಲಿ ಪಾರದರ್ಶಕ ಕಾಯಿದೆ ಹಾಗೂ ನಿಯಮಗಳನ್ನು ಪಾಲಿಸುವ ಷರತ್ತಿಗೊಳಪಡಿಸಿ ಸದರಿ ಕಾಮಗಾರಿಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಲೋಕೋಪ ಯೋಗಿ ಇಲಾಖೆಗೆ ವಹಿಸತಕ್ಕದ್ದು.

5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಶಿಇ 1042:ಐಎಫ್. (ಬಿ.ಎ.) 2008 ದಿನಾಂಕ:30.8.2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1454

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ [ಯೋಜನೆ]